# ಗೃ ಹ ದಾ ಹ



ದಿ. ಪ್ರೇಮಚಂದ

ಪ್ರತಿಭಾ ಗ್ರಂಥಮಾಲೆ, ಧಾರವಾಡ

ಪ್ರತಿಭಾ ಗ್ರಂಥಮಾಲೆ, ಧಾರವಾಡ. ವರ್ಷ ೩—ಕಿರಣ ೮

# ಗೃಹ-ದಾಹ

ಮತ್ತು

ಇತರ ಕಥೆಗಳು



ಮೂಲ ಲೇಖಕರು :

ಹಿಂದೀ ಸಾಹಿತ್ಯ ಸಮ್ರಾಟ್ ದಿ. ಪ್ರೇಮಚಂದ



ಅನುವಾದಕರು :

ರಂ. ಶಾ. ಲೋಕಾಪುರ

ಬೆಳಗಾವಿ



ಫೆಬ್ರುವರಿ ೧೯೪೭] [ಬೆಲೆ: ೧-೮ ೦

ಪ್ರಕಾಶಕರು :—

ಶ್ರೀ. ಬಾಲಚಂದ್ರ ಘಾಣೇಕರ
ಸಮಾಜ ಪುಸ್ತಕಾಲಯ
ಧಾರವಾಡ

## ಪ್ರತಿಭಾ ಗ್ರಂಥಮಾಲೆ, ಧಾರವಾಡ

**ವಾರ್ಷಿಕ ಚಂದಾ ಅಂಚೆ ವೆಚ್ಚ ಸೇರಿ ೯ ರೂ. ಮಾತ್ರ**

ಯುಗಾದಿಯಿಂದ ಯುಗಾದಿಯ ವರೆಗೆ ಎಂಟು ಉತ್ತಮ ಪುಸ್ತಕಗಳು ಪ್ರಕಟವಾಗುತ್ತವೆ.

ಮಾರ್ಚ ೨೩ಕ್ಕೆ (೧೯೪೭) ನಾಲ್ಕನೇ ವರ್ಷಾರಂಭವಾಗುವದು. ೯ರೂ. ಮನಿಯಾರ್ಡರು ಕಳಿಸಿ ಈಗಲೇ ಚಂದಾದಾರರಾಗಿರಿ

ವರ್ಷದಲ್ಲಿ ಸುಮಾರು ೧೪--೧೫ ರೂ ಮುಖ ಬೆಲೆಯ ಪುಸ್ತಕಗಳು ಚಂದಾದಾರರಿಗೆ ಸಲ್ಲುತ್ತವೆ

ಮುದ್ರಕರು :—

ಶ್ರೀ. ಎಸ್. ಎಲ್. ಜೋಶಿ
ಮೋಹನ ಮುದ್ರಣಾಲಯ
ಧಾರವಾಡ

# ಸಂಪಾದಕರ ನುಡಿ

ಇದು ನಮ್ಮ ಮಾಲೆಯ ಮೂರನೆಯ ವರುಷದ ಕೊನೆಯ ಕಿರಣ. ಕಾಗದದ ತುಟಾಗ್ರತೆಯಲ್ಲಿಯೂ ಯುದ್ಧಜನ್ಯ ಪರಿಸ್ಥಿತಿಯ ಇತರ ತೊಂದರೆ ತೊಡಕುಗಳಲ್ಲಿಯೂ ಕಳೆದ ಮೂರು ವರ್ಷಗಳಲ್ಲೂ ಪ್ರಕಟನೆಗಳನ್ನು ಸಕಾಲಕ್ಕೆ ಒದಗಿಸಿದೆವೆಂಬುದನ್ನು ಅರಿಕೆಮಾಡಿಕೊಳ್ಳಲು ಸಂತೋಷವೆನಿಸುತ್ತದೆ. ಅಲ್ಲದೆ, ನಾಲ್ಕನೆಯ ವರುಷದಲ್ಲೂ ಒಳ್ಳೊಳ್ಳೆಯ ಪುಸ್ತಕಗಳನ್ನು ನೀಡುವೆವೆಂಬ ಭರವಸೆಯಿದೆ.

ಉತ್ತಮ ಲಲಿತ-ಸಾಹಿತ್ಯವನ್ನು ಒದಗಿಸಬೇಕೆಂಬ ಮಾಲೆಯ ಉದ್ದೇಶದಲ್ಲಿ, ಹೆಚ್ಚಾಗಿ ಕಾದಂಬರಿಗಳನ್ನೊದಗಿಸಬೇಕೆಂಬ ದೃಷ್ಟಿಯನ್ನಿಟ್ಟುಕೊಂಡು, ಈ ವರುಷ ವೈವಿಧ್ಯಪೂರ್ಣವಾಗಿರಬೇಕೆಂಬ ಕಡೆಗೆ ಶಕ್ಯವಿದ್ದಮಟ್ಟಿಗೂ ಗಮನ ಕೊಡಲಾಗಿದೆ. ಮೂರು ಸಾಮಾಜಿಕ ಕಾದಂಬರಿಗಳು, ಒಂದು ನಾಟಕಗಳ ಸಂಗ್ರಹ, ಒಂದು ಕಥಾಸಂಗ್ರಹ, ಒಂದು ಸಾಹಸಮಯವಾದ ಜೀವನ ಚರಿತ್ರೆ, ಒಂದು ಐತಿಹಾಸಿಕ ಕಾದಂಬರಿ ಈ ಮೂರನೆಯ ವರುಷದಲ್ಲಿ ಬಂದಿವೆ. ಈ ಸಾಹಿತ್ಯದಲ್ಲಿ ಅರ್ಧದಷ್ಟು ಸ್ವತಂತ್ರ, ಮಿಕ್ಕುದು ಶ್ರೇಷ್ಠ ಕೃತಿಗಳ ಅನುವಾದಗಳು. ಅನುವಾದಗಳಲ್ಲಿ ಶ್ರೀ ಚಾರು ವಂದ್ಯೋಪಾಧ್ಯಾಯರೆಂಬ ಹೊಸ ಲೇಖಕರನ್ನೂ ಕನ್ನಡಿಗರಿಗೆ ಪರಿಚಯಮಾಡಿಕೊಟ್ಟದೆ. ಎಂಟನೆಯ ಕಿರಣವಾದ ಪ್ರೇಮಚಂದರ ಈ ಕಥೆಗಳನ್ನಾದರೂ ಶ್ರೀ. ರಂ. ಶಾ. ಲೋಕಾಪುರರು ರಸವತ್ತಾದ ಶೈಲಿಯಲ್ಲಿ ಅನುವಾದಿಸಿಕೊಟ್ಟರು. ಅದಕ್ಕಾಗಿ ಅವರಿಗೂ ಅನುವಾದಕ್ಕೆ ಅನುಮತಿಯನ್ನಿತ್ತು ನೆರವಾದ ಪ್ರೇಮಚಂದರ ಚಿರಂಜೀವರಾದ ಶ್ರೀ. ಶ್ರೀಪತಿರಾಯರಿಗೂ ಋಣಿಯಾಗಿದ್ದೇವೆ. ನಮ್ಮೀ ಕಾರ್ಯದಲ್ಲಿ ಸಹಕಾರಿಗಳಾಗಿದ್ದ, ಪ್ರೋತ್ಸಾಹಕರಾಗಿದ್ದ ಲೇಖಕರಿಗೂ ವಾಚಕರಿಗೂ ಮುದ್ರಣಾಲಯದವರಿಗೂ ಕೃತಜ್ಞತೆಯನ್ನು ಸಲ್ಲಿಸದಿರಲಾರೆವು.

ಮುಂದುವರಿಯುವಂತೆ ಕನ್ನಡಿಗರು ಹೆಚ್ಚುಹೆಚ್ಚಾಗಿ ಬೆಂಬಲವಿತ್ತು, ನಮ್ಮಿಂದ ಇನ್ನೂ ಹೆಚ್ಚಿನ ಸಾಹಿತ್ಯಫಲಗಳನ್ನು ಬೆಳೆಯಿಸಿಕೊಳ್ಳುವರೆಂದು ನಂಬಿದ್ದೇವೆ.

— ಭಾಲಚಂದ್ರ ಘಾಣೇಕರ

# ಪ್ರತಿಭಾ ಗ್ರಂಥಮಾಲೆ, ಧಾರವಾಡ

## ಮೊದಲನೆ ಮತ್ತು ಎರಡನೆ ವರುಷದಲ್ಲಿ

| | | | |
|---|---|---|---|
| ೧ | ಘಾಟೀಮುದುಕ† | ದೇವುಡು | ೧—೮—೦ |
| ೨ | ರಾಜಲಕ್ಷ್ಮಿ† | ಶರತ್ | ೧—೮-೦ |
| ೩ | ಅನ್ನಪೂರ್ಣಾಮಂದಿರ * | ನಿರುಪಮಾದೇವಿ | ೨—೦—೦ |
| ೪-೫ | ಸಾವಿನ ಉಡಿಯಲ್ಲಿ * | ಎನ್ಕೆ | ೩—೦—೦ |
| ೬ | ವೈಕುಂಠನ ಮೃತ್ಯುಪತ್ರ * | ಶರತ್ | ೧—೮—೦ |
| ೭ | ಚಕಮಕಿ † | ಬೇಂದ್ರೆ | ೨-೦-೦ |
| ೮-೯ | ಗಂಡುಹೆಣ್ಣಿನ ಸಮಸ್ಯೆ * | ಕುಪ್ಪಮ್ಮ | ೩—೮—೦ |
| ೧೦ | ಹೆತ್ತತಾಯಿ * | ಕಾರಂತ | ೨—೦—೦ |
| ೧೧ | ಭೂಮಾತೆ ಮತ್ತು ಮಂದಿರ * | ಶರತ್-ಪರ್ಲಬಕ್ | ೧—೮—೦ |
| ೧೨-೧೩ | ಬಿರುಗಾಳಿ * | ಪ್ರೊ. ಫಡಕೆ | ೩—೮—೦ |
| ೧೪ | ರಮಾನಾಥ * | ಪ್ರೇಮಚಂದ | ೩—೦—೦ |
| ೧೫ | ಷೋಡಶಿ * | ಶರತ್ | ೨—೦—೦ |
| ೧೬ | ನೇತಾಜಿ | ಮಲ್ಲಾರಿ | ೧—೮—೦ |

## ಮೂರನೇ ವರುಷದಲ್ಲಿ

| | | | |
|---|---|---|---|
| ೧೭ | ವಿಜಯಾ * | ಶರತ್ | ೧-೮—೦ |
| ೧೮ | ರೇಡಿಯೋ ನಾಟಕಗಳು | ಬೀ. ಚಿ. | ೧—೮—೦ |
| ೧೯ | ಸುಭಾಸ ಸೀಮೋಲ್ಲಂಘನ | ಉತ್ತಮಚಂದ | ೧—೮—೦ |
| ೨೦ | ಬೆಳವಲದ ಭಾಗ್ಯಲಕ್ಷ್ಮಿ * | ಕುಲಕರ್ಣಿ | ೨—೮—೦ |
| ೨೧ | ಧರ್ಮಸಂಕಟ * | ವಾಡೇದ | ೨—೦—೦ |
| ೨೨ | ಸಮ್ರಾಟ್ ಹರ್ಷವರ್ಧನ * | ನಾಗೇಶ | ೨—೦—೦ |
| ೨೩ | ಎರಡು ಸೆಳೆತ * | ಚಾರು ಪಂದ್ಯೋಪಾಧ್ಯಾಯ | ೧—೧೨—೦ |
| –೪ | ಗೃಹದಾಹ † | ಪ್ರೇಮಚಂದ | ೧—೮—೦ |

* ಈ ಗುರುತಿನವು ಕಾದಂಬರಿಗಳು. † ಈ ಗುರುತಿನವು ಕಥಾಸಂಕಲನಗಳು.

# ಗೃಹ-ದಾಹ

## ೧

ಸತ್ಯಪ್ರಕಾಶನ ಹುಟ್ಟುಹಬ್ಬದ ದಿನ ದೇವಪ್ರಕಾಶರು ಬಹಳ ವೆಚ್ಚ ಮಾಡಿದರು. ಆತನ ವಿದ್ಯಾರಂಭ–ಸಂಸ್ಕಾರವೂ ಸಡಗರದಿಂದ ನಡೆಯಿತು. ಆತನನ್ನು ತಿರುಗಾಡಲು ಕರೆದುಕೊಂಡು ಹೋಗಲು ಒಂದು ಕೈಗಾಡಿ ಯಿದ್ದಿತು. ಸಂಜೆಗೆ ಆಳೊಬ್ಬ ಆತನನ್ನು ತಿರುಗಾಡಲು ಕರೆದುಕೊಂಡು ಹೋಗುತ್ತಿದ್ದ. ಇನ್ನೊಬ್ಬ ಆಳು ಆತನನ್ನು ಶಾಲೆಗೆ ಮುಟ್ಟಿಸಲು ಕರೆದು ಕೊಂಡು ಹೋಗುತ್ತಿದ್ದ. ಶಾಲೆ ಬಿಡುವವರೆಗೆ ಅಲ್ಲಿಯೇ ಕೂಡ್ರುತ್ತಿದ್ದ. ಶಾಲೆ ಬಿಟ್ಟೊಡನೆ ಆತನನ್ನು ಕರೆದುಕೊಂಡು ಬರುತ್ತಿದ್ದ. ಸತ್ಯಪ್ರಕಾಶ ಒಳ್ಳೆಯ ಹುಡುಗನಾಗಿದ್ದ. ಹೂವಿನಂತಹ ಮುಖ, ದೊಡ್ಡ ದೊಡ್ಡ ಕಣ್ಣುಗಳು, ಕೆಂಪು ತುಟಿಗಳು, ನೋಡಿದವರ ಮನಸ್ಸು ಹರಿಯುತ್ತಿದ್ದಿತು. ಸತ್ಯಪ್ರಕಾಶ ಬರಿಯ ರೂಪವಂತನೆಂದಷ್ಟೇ ಅಲ್ಲ, ಬುದ್ಧಿವಂತನೂ ಆಗಿದ್ದ. ಆತನ ಮುಖದ ಮೇಲೆ ಉದಾಸೀನ ಕಳೆ ಕಾಣುವಂತಿರಲಿಲ್ಲ, ಯಾವಾಗಲೂ ನಗುಮುಖ.

ಮಳೆಗಾಲವಿದ್ದಿತು. ದೇವಪ್ರಕಾಶರು ಹೆಂಡತಿಯನ್ನೊಡಗೂಡಿ ಗಂಗಾ ಸ್ನಾನಕ್ಕಾಗಿ ಹೋದರು. ನದಿಯ ಪ್ರವಾಹ ಏರಿದ್ದಿತು. ದೇವಪ್ರಕಾಶರ ಹೆಂಡತಿ ನಿರ್ಮಲೆ ನೀರಿನಲ್ಲಿ ಆಟವಾಡತೊಡಗಿದಳು. ಹಿಂದೊಮ್ಮೆ, ಮುಂದೊಮ್ಮೆ ಸರಿಯುತ್ತ, ನೀರಿನಲ್ಲಿ ಮುಳುಗು ಹಾಕುತ್ತ, ನೀರಿನಲ್ಲಿ ಕೈಗಳಿಂದ ಸಪ್ಪಳ ಮಾಡುತ್ತಿದ್ದಳು. ದೇವಪ್ರಕಾಶ ಹೇಳಿದರು: "ಹೂಂ,ಏಳಿನ್ನು ಚಳಿಯಾದೀತು." ನಿರ್ಮಲಾ ಕೇಳಿದಳು: "ಇಲ್ಲ, ನಾನೀಗ ಎದೆಯುದ್ದ ನೀರಿನಲ್ಲಿ ಹೋಗಿ ಬರುತ್ತೇನೆ." "ಕಾಲು ಕೆಸರಿನಲ್ಲಿ ಸಿಕ್ಕು ಹೋದರೆ?" ಎಂದು ದೇವಪ್ರಕಾಶ ಕೇಳಿದರು. ನಿರ್ಮಲಾ: "ಕಾಲೇಕೆ ಸಿಕ್ಕು ಹೋದೀತು ?" ಎಂದು ಹೇಳುತ್ತ ಎದೆಮಟ್ಟ ನೀರಿನಲ್ಲಿ ಹೋಗಿಯೇ ಬಿಟ್ಟಳು. ದೇವಪ್ರಕಾಶರು ಕೂಗಿ ಹೇಳಿ-ದರು.. "ಎಲ್ಲಾದರೂ ಹೆಜ್ಜೆ ಮುಂದಕ್ಕೆ ಇಟ್ಟೀಯೇ?" ಆದರೆ ಆವರ

ಮಾತಿನ ಕಡೆಗೆ ಲಕ್ಷ್ಯ ಕೊಡುವ ಸ್ಥಿತಿಯಲ್ಲಿ ನಿರ್ಮಲೆ ಇರಲಿಲ್ಲ. ಅವಳ ಪ್ರಾಣ ಸಾವಿನೊಡನೆ ಸರಸವಾಡುತ್ತಲಿದ್ದಿತು. ನೀರಿನೊಡನಾಟ ಸಾವಿನೊಡನಾಟ ವಾಯಿತು. ಅಂದರೂ ನಿರ್ಮಲೆ ಒಂದು ಹೆಜ್ಜೆ ಮುಂದುವರಿದಳು. ಕಾಲು ಕೆಸರಿನಲ್ಲಿ ಸಿಕ್ಕುಬಿದ್ದಿತು. ಕೊನೆಗೆ ಎರಡೂ ಕೈಗಳನ್ನು ಮೇಲೆ ಮಾಡಿ ಗಟ್ಟಿ-ಯಾಗಿ ಕೂಗಿಕೊಂಡಳು. ಆದರೆ ಹಸಿದ ನದಿಗೆ ಹಾರವಾದಳು. ದೇವಪ್ರಕಾಶ ಮೈಗೆ ಎಣ್ಣೆ ಸವರಿಕೊಳ್ಳುತ್ತಿದ್ದರು. ಕೂಡಲೆ ನೀರಿನಲ್ಲಿ ಹಾರಿಕೊಂಡರು. ಇದನ್ನೆಲ್ಲ ನೋಡುತ್ತ ನಿಂತಿದ್ದ ಅಂಬಿಗರೂ ಜಿಗಿದರು. ಎಲ್ಲರೂ ಹುಡುಕಿದರು, ಬಹಳ ಹುಡುಕಿದರು. ನಿಷ್ಫಲವಾಯಿತು. ನಿರ್ಮಲೆ ಜೀವಂತ ದೊರೆ-ಯುವದೊತ್ತಟ್ಟಿಗೆ ಇರಲಿ, ಅವಳ ಹೆಣವೂ ದೊರೆಯಲಿಲ್ಲ. ಕೊನೆಗೆ ನಿರಾಶರಾಗಿ ದೇವಪ್ರಕಾಶರು ಮನೆಗೆ ಬಂದರು. ಬಂದವರೇ ತಲೆಯ ಮೇಲೆ ಕೈಯ್ಯಿಟ್ಟುಕೊಂಡು ಸ್ವಸ್ಥವಾಗಿ ಕುಳಿತರು. ಸತ್ಯಪ್ರಕಾಶ ಆತುರನಾಗಿ, ಓಡುತ್ತೋಡುತ್ತ ಬಂದು, "ಅಮ್ಮ ಎಲ್ಲಿ ?" ಎಂದು ಕೇಳಿದ.

"ಗಂಗಾಮಾತೆ ಅವಳನ್ನು ಸೇವೆಗಾಗಿ ಇಟ್ಟುಕೊಂಡಿದ್ದಾಳಪ್ಪ" ಎಂದು ಸಾವಕಾಶವಾಗಿ ಉಸುರಿದರು. ಸತ್ಯಪ್ರಕಾಶ ಜಿಜ್ಞಾಸಾಭಾವದಿಂದ ಅವರ ಮುಖದ ಕಡೆಗೆ ನೋಡಿದ. ಅರ್ಥವಾಯಿತು. ಅಳತೊಡಗಿದ.

೨

ತಾಯಿಯಿಲ್ಲದ ಮಗುವಿನ ಬಾಳು ಅತಿ ಕರುಣಾಜನಕವಾದುದು. ಎಂತಹ ದೀನ ಪ್ರಾಣಿಗಳಿಗೂ ಈಶ್ವರನು ಆಧಾರನಾಗಿದ್ದಾನೆ. ಆದರೆ ಮಗುವಿನ ದೃಷ್ಟಿಯಲ್ಲಿ ಮಾತ್ರ ತಾಯಿಗಿಂತ ಮಿಗಿಲಾದವರು ಯಾರೂ ಇಲ್ಲ. (ತಾಯಿಯಿಲ್ಲದ ಮಗು, ರೆಕ್ಕೆಯಿಲ್ಲದ ಹಕ್ಕಿಯಂತೆ.)

ಸತ್ಯಪ್ರಕಾಶ ಒಮ್ಮೊಮ್ಮೆ ಒಬ್ಬನೇ ಕುಳಿತು ದೀರ್ಘವಾಗಿ ಯೋಚಿಸು-ತ್ತಿದ್ದ. ಗಿಡಗಳು ಕೂಡ ಕರುಣಾಪೂರಿತ ದೃಷ್ಟಿಯಿಂದ ನೋಡುತ್ತಿವೆ. ಆದರೆ!!! ಮನೆಯೊಳಗೆ ನನ್ನನ್ನು ಒಬ್ಬರೂ ಕಣ್ಣೆತ್ತಿ ಕೂಡ ನೋಡುವುದಿಲ್ಲವಲ್ಲ ! ತಾಯಿಯ ಪ್ರೇಮವೊಮ್ಮೆ ಕಳೆದು ಹೋದರೆ ಎಲ್ಲರ ಪ್ರೇಮವೂ ಕಳೆದು ಹೋಗುವುದೇನೋ ಎಂದು ಎಣಿಸುತ್ತಿತ್ತು ಆತನಿಗೆ. ಏಕೆಂದರೆ ತಂದೆಯ ಮಾತುಗಳು ಕಠೋರವಾಗಿದ್ದವು.

ಆರು ತಿಂಗಳು ಕಳೆದವು. ಸಹಜವಾಗಿ ಸತ್ಯಪ್ರಕಾಶನಿಗೆ ತಿಳಿಯಿತು, ತನಗಿನ್ನು ಒಬ್ಬ ಹೊಸ ತಾಯಿ ಬರುವಳೆಂದು. ಸತ್ಯಪ್ರಕಾಶ ತಂದೆಯ ಕಡೆಗೆ ಹೋದ. ಕೇಳಿದ, "ನನಗೊಬ್ಬ ಹೊಸ ಅಮ್ಮ ಬರುವಳಂತೆ. ಹೌದೇ?"

"ಹೌದು ಮಗು, ಅವಳು ನಿನ್ನ ಮೇಲೆ ಬಹಳ ಮಮತೆ ಮಾಡುತ್ತಾಳೆ."

"ಅಮ್ಮ ಸ್ವರ್ಗಲೋಕದಿಂದ ಬರುತ್ತಾಳೇನು?"

"ಹೌದು, ಅವಳೇ ಬರುತ್ತಾಳೆ."

"ನನ್ನನ್ನು ಮೊದಲಿನಂತೆಯೇ ಪ್ರೀತಿಸುತ್ತಾಳೆ. ಅಲ್ಲವೇ?"

ದೇವಪ್ರಕಾಶ ಇದಕ್ಕೇನು ಉತ್ತರ ಕೊಡಬಲ್ಲರು? ಆದರೆ ಈ ಸಂಗತಿ ಸತ್ಯಪ್ರಕಾಶನಿಗೆ ಆನಂದದಾಯಕವಾಯಿತು. ಆತ ಬರಿಯ ಇದನ್ನೇ ಯೋಚಿಸುತ್ತಿದ್ದ—ಅಮ್ಮ ಬರುತ್ತಾಳೆ, ನನ್ನನ್ನು ತೊಡೆಯ ಮೇಲೆ ಕೂಡ್ರಿಸಿ ಕೊಳ್ಳುತ್ತಾಳೆ, ನಾನು ಅವಳೊಡನೆ ಕೊಂಚವೂ ರೇಗಿಗೇಳುವುದಿಲ್ಲ ಉತ್ತಮ-ಉತ್ತಮ ಕತೆ ಹೇಳುತ್ತೇನೆ...........

ಮದುವೆಯ ದಿನಗಳು ಬಂದವು. ಮನೆಯಲ್ಲಿ ಸಿದ್ಧತೆಯೂ ನಡೆಯಿತು. ಸತ್ಯಪ್ರಕಾಶನ ಹಿಗ್ಗು ಮೇರೆ ಮೀರಿತ್ತು. ಇನ್ನೇನು! ಆತನ ತಾಯಿ ಬರುವಳಲ್ಲವೇ? ಹೊಸ ಹೊಸ ಅರಿವೆಗಳು ದೊರೆತವು. ಪಲ್ಲಕ್ಕಿಯಲ್ಲಿ ಕೂಡ್ರಲು ದೊರೆಯಿತು.

ಮದುವೆಯಾದ ದಿನ ಇವನ ಅಜ್ಜಿ ಈತನನ್ನು ಒಳಕ್ಕೆ ಕರೆದು ಕೈಯಲ್ಲೊಂದು ರೂಪಾಯಿ ಕೊಟ್ಟಳು. ಅಲ್ಲಿಯೇ ಸತ್ಯಪ್ರಕಾಶನಿಗೆ ತಾಯಿಯ ದರ್ಶನ ಚೆನ್ನಾಗಿ ಆಯಿತು. ಅಜ್ಜಿ ಸತ್ಯಪ್ರಕಾಶನ ತಾಯಿಗೆ ಹೇಳಿದಳು: "ಮಗು, ಹುಡುಗ ಎಷ್ಟು ಸುಂದರನಾಗಿದ್ದಾನೆ. ಈತನನ್ನು ನೀನು ಪ್ರೀತಿಸ ಬೇಕಲ್ಲವೇ?" ಸತ್ಯಪ್ರಕಾಶ ಅವಳನ್ನು ಚೆನ್ನಾಗಿ ನೋಡಿದ. ಅಮ್ಮ ಚೆನ್ನಾಗಿದ್ದಳು. ಒಮ್ಮೆಲೆ ಕೂಗುತ್ತ ಅಪ್ಪಿದ, "ಅಮ್ಮ."

ಎಷ್ಟು ನೀರಸವಾದ, ನಾಚಿಕೆಗೇಡಿಯಾದ, ಅಪ್ರಿಯವಾದ ಮಾತು ಅದು! ದೇವಪ್ರಿಯೆಗೆ, ಸತ್ಯಪ್ರಕಾಶನ ಹೊಸ ತಾಯಿಗೆ ಸಿಟ್ಟು ಬಂದಿತು. ಅವಳಾಗ ನೋಡುತ್ತಿದ್ದುದು ದೈನ್ಯವೇ ಮೂರ್ತಿವೆತ್ತಂತಿದ್ದ ಸತ್ಯಪ್ರಕಾಶನನ್ನಲ್ಲ, ತನ್ನ ಭಾವೀ ಜೀವನದ ಸೌಖ್ಯದ ಸವಿಗನಸುಗಳನ್ನು. ತಾನಿನ್ನು ಸೌಖ್ಯಸಾಗರದಲ್ಲಿ ಓಲಾಡುವೆನೆಂಬ ಹೆಮ್ಮೆ ಅವಳ ಕಣ್ಣುಗಳಲ್ಲಿ ನಿಚ್ಚಳವಾಗಿ ಕಾಣಾ-

ತ್ತಿದ್ದಿತು. ಬಿರುಸು ದನಿಯಿಂದಲೇ ದೇವಪ್ರಿಯೆ ಹೇಳಿದಳು, "ನನಗಿನ್ನು ನೀನು ಅಮ್ಮ ಎನ್ನ ಕೂಡದು. ತಿಳಿಯಿತೇ?"

ಸತ್ಯಪ್ರಕಾಶ ಚಕಿತನೇತ್ರಗಳಿಂದ ತಾಯಿಯನ್ನು ನೋಡಿದ. ಆತನು ಇಷ್ಟು ದಿನಗಳವರೆಗೆ ವ್ಯರ್ಥವಾಗಿ ಕಟ್ಟಿದ ಗಾಳಿಗೋಪುರ ಒಡೆದು ಚೂರು ಚೂರಾಗಿ ಹೋಯಿತು. ಅಜ್ಜಿ ಹೇಳಿದಳು: "ಮಗು, ಹುಡುಗನ ಮುಖ ಎಷ್ಟು ಚಿಕ್ಕದಾಯಿತು, ನೋಡು. ಏನೆನ್ನಬೇಕೆಂಬುದು ಆತನಿಗೇನು ಗೊತ್ತು? ಆತ ಅಮ್ಮ ಎಂದು ಹೇಳಿದರೆ ನೀನೇಕಿಷ್ಟು ಮನಸ್ಸಿಗೆ ಹಚ್ಚಿಕೊಳ್ಳ ಬೇಕು?"

ದೇವಪ್ರಿಯೆ ಖಂಡಿತದ ಸ್ವರದಿಂದ ಹೇಳಿದಳು, "ಆತ ನನಗೆ ಅಮ್ಮ ಎನ್ನಕೂಡದು."

## ೩

ಸವತಿಯ ಮಕ್ಕಳನ್ನು ಮಲತಾಯಿ ಇಷ್ಟೇಕೆ ಕೆಟ್ಟರೀತಿಯಲ್ಲಿ ನಡೆಯಿಸಿ ಕೊಳ್ಳುವಳೆಂಬುದನ್ನು ಯಾವ ಮಾನಸಶಾಸ್ತ್ರಜ್ಞನೂ ನಿರ್ಣಯಿಸಿ ಹೇಳಲಾರ.

ದೇವಪ್ರಿಯೆ ಬಸಿರಾಗುವ ವರೆಗೆ ಸತ್ಯಪ್ರಕಾಶನನ್ನು ಯಾವಾಗಲಾದ-ರೊಮ್ಮೆ ಕರೆಯುತ್ತಿದ್ದಳು, ಕುಳ್ಳಿರಿಸಿಕೊಳ್ಳುತ್ತಿದ್ದಳು, ಕತೆ ಹೇಳುತ್ತಿದ್ದಳು. ಆದರೆ ಬಸಿರಾದ ಮೇಲಂತೂ ತೀರಿಯೇ ಹೋಯಿತು. ಅವಳ ವ್ಯವಹಾರ ಇನ್ನಿಷ್ಟು ಕಠೋರವಾಯಿತು. ನವಮಾಸ ಸಮಾಪಿಸಿದಂತೆಲ್ಲ ಅದು ಬೆಳೆ ಯುತ್ತಲೇ ಇದ್ದಿತು. ಅವಳು ಮಗನನ್ನು ಹಡೆದ ದಿನ ಸತ್ಯಪ್ರಕಾಶ ಅತ್ಯಾ ನಂದದಿಂದ ಕುಣಿದು ಕುಪ್ಪಳಿಸುತ್ತ ಮಗುವನ್ನು ನೋಡಲು ದೇವಪ್ರಿಯೆಯ ಕೋಣೆಗೆ ಹೋದ. ದೇವಪ್ರಿಯೆ ಮಗುವನ್ನು ತೊಡೆಯ ಮೇಲೆ ಮಲಗಿಸಿ ಕೊಂಡು ಗೋಡೆಗೆ ಒರಗಿ ಹಾಸಿಗೆಯ ಮೇಲೆ ಕುಳಿತಿದ್ದಳು. ಸತ್ಯಪ್ರಕಾಶ ಉತ್ಸುಕತೆಯಿಂದ ಮಗುವನ್ನು ತೆಗೆದುಕೊಳ್ಳಲು ಕೈ ಚಾಚಿದ. ಅಷ್ಟರಲ್ಲಿ ತಾಯಿಯ ಕಠೋರವಾಣಿ ಕೇಳಬಂತು—"ಹೂಂ, ಜೋಕೆ, ಮಗುವನ್ನೆಲ್ಲಾ ದರೂ ಮುಟ್ಟೀಯೋ? ಮುಟ್ಟಿದರೆ ಕಿವಿ ಹಿಂಡುತ್ತೇನೆ."

ಸತ್ಯಪ್ರಕಾಶ ಬಂದ ದಾರಿಯಿಂದ ತಿರುಗಿ ಹೊರಟು ಹೋದ. ಕೋಣೆ ಯಲ್ಲಿ ಒಬ್ಬನೇ ಕುಳಿತುಕೊಂಡು ಸಾಕಷ್ಟು ಅತ್ತ; ಹೃದಯ ಹಗುರಾಗುವ

ವರೆಗೆ ಅತ್ತ. ಯೋಚಿಸತೊಡಗಿದ—ಮಗು ಎಷ್ಟು ಸುಂದರವಾಗಿದೆ. ಅಹಾ! ಅದನ್ನೆತ್ತಿ ತೊಡೆಯ ಮೇಲಿಟ್ಟುಕೊಂಡರೆ!! ನಾನದಕ್ಕೆ ಸ್ವಲ್ಪ ಕೈ ಹಚ್ಚಿದರೆ ಅಮ್ಮ ಎಷ್ಟು ಉರಿದುಬಿದ್ದಳಲ್ಲ; ಹೋಗಲಿ, ಅವಳು ನನ್ನನ್ನು ಹೀಗೇಕೆ ಕಾಣುತ್ತಾಳೆ? ಅದು ಆತನಿಗೊಂದು ಬಗೆಹರಿಯದ ಸಮಸ್ಯೆಯಾಗಿ ಪರಿಣಮಿಸಿತು.

ಮಗುವಿಗೆ 'ಜ್ಞಾನಪ್ರಕಾಶ'ನೆಂದು ಹೆಸರಿಟ್ಟರು. ಒಂದು ದಿನ ಮಗು ಮಲಗಿತ್ತು. ದೇವಪ್ರಿಯೆ ಬಚ್ಚಲಿನಲ್ಲಿ ಜಳಕ ಮಾಡುತ್ತಿದ್ದಳು. ಸತ್ಯಪ್ರಕಾಶ ಗುಟ್ಟಾಗಿ ಬಂದು ಮಗುವನ್ನು ಪ್ರೇಮಪೂರಿತ ದೃಷ್ಟಿಯಿಂದ ನೋಡತೊಡಗಿದ. ಈತನನ್ನೀಗ ತೊಡೆಯಮೇಲೆ ಮಲಗಿಸಿಕೊಂಡರೆ!! ಆದರೆ ಆತನಿಗೆ ಧೈರ್ಯ ಸಾಲದೆ ಹೋಯಿತು. ಆತ ಬರಿಯ ಮುದ್ದು ಕೊಡತೊಡಗಿದ. ಇಷ್ಟರಲ್ಲಿ ದೇವಪ್ರಿಯೆ ಅಲ್ಲಿ ಬಂದು ನೋಡಿದಳು. ಕಾದುಕಾದು ಕೆಂಡವಾದಳು. ಕಣ್ಣುಗಳು ಬೆಂಕಿ ಕಾರುತ್ತಲಿದ್ದವು. ದೂರದಿಂದಲೇ ಕೂಗಿದಳು, "ಓಡೋ ಮುಠ್ಠಾಳ."

ಸತ್ಯಪ್ರಕಾಶ ದೀನ ನೇತ್ರಗಳಿಂದ ತಾಯಿಯನ್ನು ನೋಡುತ್ತ ಮೆಲ್ಲಗೆ ಜಾರಿ ಹೋದ.

ಸಂಜೆಗೆ ದೇವಪ್ರಕಾಶ ಕೊಂಚ ಸಿಟ್ಟಿನಿಂದಲೇ ಕೇಳಿದರು, "ನೀನು ಮಗುವನ್ನು ಏಕೆ ಅಳಿಸುತ್ತೀ?" "ನಾನೇನು ಅಳಿಸಿಲ್ಲವಲ್ಲ? ಅಮ್ಮ ನನಗೆ ಅದರೊಡನೆ ಆಡಲು ಕೂಡ ಕೊಡುವುದಿಲ್ಲ" ಎಂದು ಹೇಳಿದ ಸತ್ಯಪ್ರಕಾಶ.

ದೇವಪ್ರಿಯೆ ಹೇಳಿದಳು. "ನನ್ನ ಮುಂದೆ ಸುಳ್ಳು ಹೇಳುತ್ತೀಯಾ? ನೀನು ಇಂದು ಮಗುವನ್ನು ಚಿವುಟಲಿಲ್ಲವೇ?"

"ಇಲ್ಲ ನಾನು ಬರಿಯ ಮುದ್ದು ಕೊಡುತ್ತಿದ್ದೆ, ಅಮ್ಮ," ಸತ್ಯಪ್ರಕಾಶ ಹೇಳಿದ: "ಸುಳ್ಳು, ಸಂಪೂರ್ಣ ಸುಳ್ಳು," ದೇವಪ್ರಿಯೆ ಕೂಗಿದಳು. ಸತ್ಯಪ್ರಕಾಶ ಹೇಳಿದ "ಇಲ್ಲ ಅಮ್ಮ, ನಾನು ಸುಳ್ಳು ಹೇಳುವುದಿಲ್ಲ."

ದೇವಪ್ರಕಾಶರು ರೇಗಿಗೆದ್ದರು. ಸತ್ಯಪ್ರಕಾಶನಿಗೆ ಚೆನ್ನಾಗಿ ಪಾದಪೂಜೆಯಾಯಿತು. ಇದೇ, ಅವರು ಸತ್ಯಪ್ರಕಾಶನನ್ನು ಹೊಡೆದುದು ಮೊದಲನೆಯ ಸಲ. ಅಪರಲ್ಲಿ ನಿರಪರಾಧಿ ಸತ್ಯಪ್ರಕಾಶ! ಆತನ ಜೀವನ ಮಾರ್ಗವನ್ನು ಬದಲಿಸಿದ ಸುಮುಹೂರ್ತವಿದು.

ಅಂದಿಂದ ಸತ್ಯಪ್ರಕಾಶನಲ್ಲಿ ವಿಚಿತ್ರ ಪರಿವರ್ತನೆಯಾಯಿತು. ಆತ ಮನೆಗೆ ಬರುವುದು ಕಡಿಮೆಯಾಗತೊಡಗಿತು. ತಂದೆ ಬಂದರಂತೂ ತಲೆ ತಪ್ಪಿಸಿಕೊಳ್ಳುತ್ತಿದ್ದ. ಏನಾದರೂ ತಿನ್ನುವುದಕ್ಕೆ ಕರೆದರೆ ಬರುತ್ತಿದ್ದ, ಇದ್ದಷ್ಟು ತಿಂಡಿ ತಿಂದು ಹೋಗುತ್ತಿದ್ದ. ಮೊದಮೊದಲು ಆತನ ಬುದ್ಧಿ ತೀಕ್ಷ್ಣವಾಗಿತ್ತು. ಆತನ ಸ್ವಚ್ಛತೆ, ಉತ್ತಮ ನಡತೆ, ರೂಪುಗಳನ್ನು ನೋಡಿ ಜನರು ಮುಗ್ಧರಾಗುತ್ತಿದ್ದರು. ಆದರೆ ಈಗ ಆತನು ಪಾಠ ಓದುತ್ತಿರಲಿಲ್ಲ. ಸ್ವಚ್ಛ ಬಟ್ಟೆ ಹಾಕಿಕೊಳ್ಳುತ್ತಿದ್ದಿಲ್ಲ. ಉದಾಸೀನತೆ. ಪೇಟೆಯ ಹುಡುಗ ರೊಡನೆ ತಿರುಗುತ್ತಿದ್ದ. ಹುಡುಗರೊಡನೆ ಜಗಳವಾಡುತ್ತಿದ್ದ. ಶರೀರದಲ್ಲಿ ಅಶಕ್ತತೆ ಉಂಟಾಗತೊಡಗಿತು. ಮುಖಕಾಂತಿ ಅಡಗಿಹೋಯಿತು. ಮನೆ ಯಲ್ಲಿ ಮೇಲಿಂದ ಮೇಲೆ ಪ್ರಸಾದವೂ ದೊರೆಯುತ್ತಿದ್ದಿತು. ಜನರಲ್ಲಿ ತಿರ ಸ್ಕಾರವೂ ಮೊಳೆಯಲಾರಂಭಿಸಿತು.

ಜ್ಞಾನಪ್ರಕಾಶನಿಗೆ ಪಾಠ ಹೇಳುವುದಕ್ಕೆಂದು ಮನೆಗೆ ಒಬ್ಬ ಮೇಷ್ಟ್ರು ಬರುತ್ತಿದ್ದರು. ಜ್ಞಾನಪ್ರಕಾಶ ತಂದೆಯೊಡನೆ ತಿರುಗಾಡಲು ಹೋಗುತ್ತಿದ್ದ. ನಗುಮುಖದ ಜ್ಞಾನಪ್ರಕಾಶನ ಮೇಲೆ ಮನೆಯಲ್ಲಿ ಸತ್ಯಪ್ರಕಾಶನ ಎಳ್ಳ ಷ್ಟಾದರೂ ದೃಷ್ಟಿ ಬೀಳದಂತೆ ದೇವಪ್ರಿಯೆ ನೋಡಿಕೊಳ್ಳುತ್ತಿದ್ದಳು. ಇಬ್ಬರು ಹುಡುಗರಲ್ಲದೆಷ್ಟು ಅಂತರ! 'ಒಬ್ಬ ಸ್ವಚ್ಛ, ವಿನಯಶಾಲಿ, ಶೀಲವಂತ,' ಎಂದು ನೋಡುವವರು ಹೇಳುತ್ತಿದ್ದರು. ಆದರೆ ಇನ್ನೊಬ್ಬ? ಹೊಲಸು, ಕಳ್ಳರಂತೆ ತಲೆ ತಪ್ಪಿಸುತ್ತ, ಕೆಟ್ಟ ಕೆಟ್ಟ ಬೈಗಳನ್ನು ಬೈಯುತ್ತಿರುವ ದುರಾ-ಚಾರಿ. ಒಬ್ಬ ಎಳೆಯ, ಪ್ರೇಮಮೂರ್ತಿ, ಸ್ನೇಹಮಯ. ಇನ್ನೊಬ್ಬ ನವ ವೃಕ್ಷಕ್ಕೆ ನೀರು ಹಾಕದೆ ಒಣಗಿರುವಂತೆ ಒಣಗಿರುವವ, ಯಾರೊಬ್ಬರ ಮಮ ತೆಗೂ ಪಾತ್ರನಾಗದವ. ಒಬ್ಬನನ್ನು ನೋಡಿ ದೇವಪ್ರಕಾಶಕರ ಎದೆ ಅರಳು ತ್ತಿತ್ತು, ಮತ್ತೊಬ್ಬನನ್ನು ನೋಡಿ ಮುದುರುತ್ತಿತ್ತು.

ಆದರೆ ಸತ್ಯಪ್ರಕಾಶನಿಗೆ ತನ್ನ ತಮ್ಮನ ಬಗ್ಗೆ ಎಳ್ಳಷ್ಟೂ ದ್ವೇಷವಿರಲಿಲ್ಲ. ಆತನ ಹೃದಯದಲ್ಲಿ ಅದೇ, ಜ್ಞಾನಪ್ರಕಾಶ ತನ್ನನ್ನು ಪ್ರೀತಿಸುತ್ತಾನೆಂಬುದೇ, ಕೋಮಲತೆಯನ್ನು ಹುಟ್ಟಿಸಿದ್ದಿತು. ಅವನ ಮನೋಭೂಮಿಯಲ್ಲಿ ಅದೇ

ಮೃಗತೃಷ್ಣಿಕೆಯಾಗಿ ಪರಿಣಮಿಸಿದ್ದಿತು. ಇಬ್ಬರು ಸರಿಕರಲ್ಲಿ ಮಾತ್ರ ದ್ವೇಷ ಸಂಭವ. ಆತನಿಗೆ ಜ್ಞಾನಪ್ರಕಾಶ ತನಗಿಂತ ಹೆಚ್ಚಿನ ಭಾಗ್ಯಶಾಲಿ ಎಂಬ ಭಾವನೆ ಇದ್ದಿತು. ಆದಕ್ಕಾಗಿ ಈರ್ಷೆಗೆ ಆಸ್ಪದವಿರಲಿಲ್ಲ.

ವೈರದಿಂದ ವೈರವು ಹುಟ್ಟುತ್ತದೆ; ಪ್ರೇಮದ ಪ್ರತಿಫಲ ಪ್ರೇಮ. ಜ್ಞಾನಪ್ರಕಾಶನೂ ತನ್ನ ಅಣ್ಣನನ್ನು ಪ್ರೀತಿಸುತ್ತಿದ್ದ. ಒಮ್ಮೊಮ್ಮೆ ಆತನ ಕಡೆಗೆಯೇ ಆಗಿ ತಾಯಿಯೊಡನೆ ಜಗಳಾಡುತ್ತಿದ್ದ. ಹೇಳುತ್ತಿದ್ದ, "ಅಣ್ಣನ ಅಂಗಿ ಹರಿದಿದೆ. ಆತನಿಗೆ ಹೊಸ ಅಂಗಿಯನ್ನೇಕೆ ಹೊಲಿಸಿ ಕೊಡಬಾರದು?" ತಾಯಿ ಉತ್ತರವೀಯುತ್ತಿದ್ದಳು, "ಇಲ್ಲ, ಆತನಿಗೆ ಆದೇ ಅಂಗಿ ಯೋಗ್ಯವಾದದ್ದು. ಇನ್ನೇನು ಹೇಳುವುದು ಉಳಿದಿದೆ? ಇನ್ನು ಆತ ಬತ್ತಲೆ ಕೂಡ ತಿರುಗಬಹುದು."

ಜ್ಞಾನಪ್ರಕಾಶನಿಗೆ ಎನಿಸುತ್ತಿತ್ತು, 'ತಾನು ತನ್ನ ವೆಚ್ಚದಿಂದ ಹಣವನ್ನು ಉಳಿಸಿ ಅಣ್ಣನಿಗೆ ಕೊಡಬಹುದಲ್ಲ' ಎಂದು. ಆದರೆ ಸತ್ಯಪ್ರಕಾಶ ಅದನ್ನು ಸ್ವೀಕರಿಸುತ್ತಿರಲಿಲ್ಲ ನಿಜವಾಗಿ, ಸತ್ಯಪ್ರಕಾಶನಿಗೆ ಜ್ಞಾನಪ್ರಕಾಶನೊಡನೆ ಇರುವುದರಷ್ಟು ಸೊಗಸು ಮತ್ತೆಲ್ಲೂ ಕಂಡುಬರುತ್ತಿರಲಿಲ್ಲ. ಈಗ ಆತನ ಬಾಯಿಂದ ಅಸಹ್ಯ ಬೈಗಳು ಹೊರಬೀಳುತ್ತಿರಲಿಲ್ಲ. ಸತ್ಯಪ್ರಕಾಶನ ಎದೆ ಹಗುರಾಗತೊಡಗಿತು.

ಒಂದು ಸಲ ಆತ ಶಾಲೆಗೆ ಹೋಗಲಿಲ್ಲ. ತಂದೆ ಕೇಳಿದರು, "ಇತ್ತೀಚೆಗೆ ನೀನು ಶಾಲೆಗೆ ಏಕೆ ಹೋಗುವುದಿಲ್ಲ? ನಾನೇ ಕೊನೆಯ ವರೆಗೆ ನಿನಗೆ ಹೊಟ್ಟೆಗೆ ಹಾಕುತ್ತೇನೆಂದು ತಿಳಿದಿದ್ದೀಯೇನು?"

"ನನಗೆ ದಂಡ, ಫೀ ಕೂಡಿ ಬಹಳ ರೂಪಾಯಿಗಳಾಗಿವೆ. ಹೋದರೆ ಹೊರಗೆ ಹಾಕುತ್ತಾರೆ."

"ಫೀ ಏಕೆ ಉಳಿದಿದೆ? ತಿಂಗಳೂ ಒಯ್ಯುವೆಯಲ್ಲ?"

"ವರ್ಗಣಿ ಕೂಡಿಸಹತ್ತಿದ್ದಾರೆ. ವರ್ಗಣಿಗಾಗಿ ಕೊಟ್ಟೆ."

"ದಂಡ ಏಕೆ ಆಯಿತು?"

"ಫೀ ಕೊಡದ್ದಕ್ಕಾಗಿ."

"ನೀನು ವರ್ಗಣಿ ಏಕೆ ಕೊಟ್ಟೆ?"

"ಜ್ಞಾನಪ್ರಕಾಶ ಕೊಟ್ಟ, ನಾನೂ ಕೊಟ್ಟೆ."

“ ನೀನು ಜ್ಞಾನಪ್ರಕಾಶನಿಗೆ ಸರಿಯೇ ? ”

“ ಇಲ್ಲಿ ನಾವು ಇಬ್ಬರು ಎಂದು ಎಣಿಸಲ್ಪಟ್ಟರೂ ಹೊರಗೆ ನಾವು ಒಂದು ಎಂದು ಎಣಿಸಲ್ಪಡುತ್ತೇವೆ. ”

“ ಇವನ್ನು ಹೇಳುವುದಕ್ಕೆ ನಿನಗೆ ನಾಚಿಕೆಯಾಗುವುದಿಲ್ಲವೇ ? ”

“ ಅಹುದು. ಆದರೆ ತಮ್ಮ ಹೆಸರು ಕೆಡಬಹುದಲ್ಲ ? ”

“ ನೀನು ನನಗೆ ಚೆನ್ನಾಗಿ ಆದರ ಮಾಡುತ್ತಿದ್ದೀ ಅಲ್ಲವೆ ? ಇಷ್ಟೇ ಏಕೆ? ನೀನಿನ್ನು ಮುಂದೆ ಓದಲಾಗದು. ನೀನು ಒಂದೊಂದು ತರಗತಿಯಲ್ಲಿ ಮೂರು ಮೂರು ವರ್ಷ ಓದುವ ವರೆಗೆ ನಿನ್ನ ಫೀ ಕೊಡುವಷ್ಟು ನನ್ನ ಹತ್ತಿರ ರೂಪಾಯಿ ಗಳಿಲ್ಲ. ಮತ್ತೆ ಮೇಲೆ ನಿನಗಾಗಿ ವೆಚ್ಚ ! ಜ್ಞಾನ ನಿನಗಿಂತ ಎಷ್ಟು ಚಿಕ್ಕವ ನಾಗಿದ್ದಾನೆ. ಆದರೆ ಎಲ್ಲದರಲ್ಲೂ ನಿನಗೆ ಮಿಗಿಲೆನಿಸುತ್ತಾನೆ. ನೀನು ಈ ವರ್ಷ ಫೈಲ್ ಆಗುವುದು ಖಂಡಿತ. ಬಳಿಕ ನಿನ್ನ ಮೋರೆ ಕಪ್ಪಾಗುವುದಲ್ಲವೆ?”

“ ವಿದ್ಯೆ ನನ್ನ ಹಣೆಯಲ್ಲಿ ಬರೆದಿಲ್ಲ. ”

“ ಹಾಗಾದರೆ ನಿನ್ನ ಹಣೆಯಲ್ಲಿ ಬರೆದುದಾದರೂ ಏನು ? ”

“ ಬಿಕ್ಕೆ ಬೇಡುವುದು. ”

“ ಒಳ್ಳೆಯದು, ಹಾಗಾದರೆ ಬಿಕ್ಕೆಯನ್ನೇ ಬೇಡು. ಮನೆಯಿಂದ ಹೊರಟುಹೋಗು. ”

ಅಷ್ಟರಲ್ಲಿ ದೇವಪ್ರಿಯೆ ಬಂದಳು.

“ ಮಾತಿಗೆ ಉತ್ತರ ಹೇಳುತ್ತೀಯಾ ? ನಾಚಿಕೆ ಬರುವುದಿಲ್ಲವೇ ? ”

ಸತ್ಯಪ್ರಕಾಶ ಹೇಳಿದ, “ ಬಿಕ್ಕೆ ಬೇಡುವುದೇ ಹಣೆಬರಹವಾಗಿದ್ದವರು ಹುಟ್ಟಿನಿಂದಲೂ ಅನಾಥರಾಗಿರುತ್ತಾರೆ. ”

“ ಇಂತಹ ಕಟುವಾಕ್ಯ ನನ್ನಿಂದ ಇನ್ನು ಸಹಿಸಲಾಗುವುದಿಲ್ಲ. ನನ್ನ ರಕ್ತ ಸುಮ್ಮನೆ ವ್ಯರ್ಥವಾಗುತ್ತಿದೆ. ” ದೇವಪ್ರಿಯೆ ಹೇಳಿದಳು.

“ ಸರಿ, ನಾಳೆ ಈತನ ಹೆಸರು ತೆಗೆಯಿಸಿಬಿಡುತ್ತೇನೆ. ಬಿಕ್ಕೆ ಬೇಡುವುದಾದರೆ ಬಿಕ್ಕೆಯನ್ನೇ ಬೇಡಲಿ. ” ದೇವಪ್ರಕಾಶರು ದನಿಗೂಡಿಸಿದರು.

ಮರುದಿನ ಸತ್ಯಪ್ರಕಾಶ ಮನೆಬಿಟ್ಟು ಹೊರಡುವ ಸಿದ್ಧತೆಯಲ್ಲಿ ತೊಡಗಿದ. ಆತನ ವಯಸ್ಸು ಈಗ ಹದಿನಾರು ಆಗಿದ್ದಿತು. ಇಷ್ಟು ಮಾತುಗಳನ್ನು ಕೇಳಿದ ಬಳಿಕ ಮನೆಯಲ್ಲಿರುವುದು ಆತನಿಗೆ ಅಸಹ್ಯವಾಗಿ ಪರಿಣಮಿಸಿತು. ಆತನಿಗೆ ಸ್ವತಂತ್ರನಾಗುವ ಸ್ಥಿತಿಯು ಬರುವ ತನಕ ಆತ ಈ ಕಠೋರ ಶಬ್ದಗಳನ್ನು ಸಹಿಸುತ್ತಲಿದ್ದ. ಆದರೆ ಇನ್ನೇಕೆ ಆ ಬಂಧನದಲ್ಲಿರಬೇಕು ?

ಬೇಸಗೆಯ ಕಾಲ. ಮಧ್ಯಾಹ್ನದಲ್ಲಿ ಎಲ್ಲರೂ ಮಲಗಿದ್ದರು. ಸತ್ಯ-ಪ್ರಕಾಶ ತನ್ನ ಕಂಕುಳದಲ್ಲಿ ದೋತರವನ್ನಿಟ್ಟು, ಕೈಯಲ್ಲೊಂದು ಪೆಟ್ಟಿಗೆಯನ್ನು ಹಿಡಿದು ಕಳ್ಳ ಹೆಜ್ಜೆಯಲ್ಲಿ ಹೊರಟಿದ್ದ. ಅಷ್ಟರಲ್ಲಿ ಜ್ಞಾನಪ್ರಕಾಶ ಬಂದ.

" ಎಲ್ಲಿ ಹೊರಟೆ ಅಣ್ಣ ? "

" ಹೋಗುತ್ತೇನೆ, ಎಲ್ಲಿಯಾದರೂ ಕೂಲಿ-ಕುಂಬಳಿ ಮಾಡಿ ಹೊಟ್ಟೆ ಹೊರೆದುಕೊಳ್ಳುತ್ತೇನೆ. "

" ನಾನು ಅಮ್ಮನಿಗೆ ಹೋಗಿ ಹೇಳುತ್ತೇನೆ. "

" ಹಾಗಾದರೆ ನಾನು ನಿನಗೆ ಹೇಳದೆ ಕೇಳದೆ ಹೋಗುತ್ತೇನೆ. "

" ಏಕೆ ಹೋಗುತ್ತೀಯೆ ? ನನ್ನ ಮೇಲೆ ನಿನಗೆ ಸ್ವಲ್ಪವೂ ಕರುಣೆ ಇಲ್ಲವೇ ? "

ಸತ್ಯಪ್ರಕಾಶ ತಮ್ಮನನ್ನಪ್ಪಿಕೊಂಡು ಹೇಳಿದ:

" ನಿನ್ನನ್ನು ಬಿಟ್ಟು ಹೋಗಲು ಮನಸ್ಸು ಆಗುವುದಿಲ್ಲ. ಕೇಳುವವರಿಲ್ಲದಲ್ಲಿ ಬಾಳ್ವೆ ನೂಕುವುದು ಒಳ್ಳೆಯದೇ ? ಐದು ಹತ್ತು ರೂಪಾಯಿ ಗಳಿಸಿ ಹೇಗಾದರೂ ಬಾಳ್ವೆ ಸಾಗಿಸುವೆ. "

" ನಿನಗೇಕೆ ಅಮ್ಮನ ಮೇಲೆ ಇಷ್ಟು ಸಿಟ್ಟು ? ನಿನ್ನೊಡನೆಯೇ ಯಾವಾಗಲೂ ಇರಬೇಕೆಂದು ನನಗೆ ಎನಿಸುವುದು. "

" ನನ್ನ ಹಣೆಬರಹದಲ್ಲೇ ಹಾಗೆ ಬರೆದಿದ್ದರೆ ನಾನೇನು ಮಾಡಲಿ ? "

" ಓದುವುದು ನಿನಗೆ ಇಷ್ಟವಿಲ್ಲವೇ ? "

“ ಇನ್ನು ನನ್ನಿಂದ ಓದಲಾಗುವುದಿಲ್ಲ. ಇದೇ ಮೇಲೆಂದು ತೋರುತ್ತದೆ.”

" ನನ್ನನ್ನು ಮರೆಯುವುದಿಲ್ಲವಷ್ಟೇ ? ನಾನು ನಿನಗೆ ಪತ್ರ ಬರೆಯುತ್ತಿರುವೆ. ನನ್ನನ್ನು ಒಮ್ಮೆ ನೀನು ಕರೆಯಿಸಿಕೊಳ್ಳಬೇಕು. ”

“ ನಿನ್ನ ಶಾಲೆಯ ವಿಳಾಸದ ಮೇಲೆ ಪತ್ರ ಬರೆಯುತ್ತಿರುವೆ. ”

“ ನೀನು ಹೋಗಬೇಕೆಂದೇ ಏಕೆ ಹಟ ತೊಟ್ಟಿಯೋ ನನಗೆ ತಿಳಿಯಲೊಲ್ಲದು. ”

“ ಇಲ್ಲ, ನಾನು ನಿನ್ನನ್ನು ಯಾವಾಗಲೂ ಸ್ಮರಿಸುತ್ತ ಇರುವೆ. ”

ಇಷ್ಟು ಹೇಳಿ ಆತ ಮತ್ತೊಮ್ಮೆ ತಮ್ಮನನ್ನಪ್ಪಿಕೊಂಡು ಮನೆಯಿಂದ ಹೊರಹೊರಟ. ಹತ್ತಿರ ಒಂದು ಒಡಕು ಕಾಸೂ ಇರಲಿಲ್ಲ. ಆದರೆ ಆತ ಕಲಕತ್ತೆಗೆ ಹೋಗುತ್ತಿದ್ದ !

೬

ಸತ್ಯಪ್ರಕಾಶನು ಕಲಕತ್ತೆಯನ್ನು ಹೇಗೆ ಮುಟ್ಟಿದನೆಂದು ಬರೆಯುವುದು ಅನವಶ್ಯ. ಯುವಕರಲ್ಲಿ ದುಸ್ಸಾಹಸದ ಅಂಶ ಬಲವಾಗಿರುತ್ತದೆ. ಅವರು ಗಾಳಿಯಲ್ಲಿ ಗೋಪುರ ಕಟ್ಟಬಹುದು; ನೆಲದ ಮೇಲೆ ನಾವೆ ಆಡಿಸಬಹುದು. ಅವರಿಗೆ ಕಷ್ಟಗಳ ಪರಿವೆಯೇ ಇರುವುದಿಲ್ಲ; ತಮ್ಮಲ್ಲಿಯೇ ಹೆಚ್ಚು ನಂಬುಗೆ.

ಕಲಕತ್ತೆಯನ್ನು ಮುಟ್ಟುವುದು ಸತ್ಯಪ್ರಕಾಶನಿಗೆ ಅಷ್ಟೊಂದು ದುಸ್ಸಾಧ್ಯವಾಗಿರಲಿಲ್ಲ. ಆತನ ಬುದ್ಧಿ ಚುರುಕು. ಆತ ಕಲಕತ್ತೆಯಲ್ಲಿ ಎಲ್ಲಿ ಇರಬೇಕು, ಏನು ಉದ್ಯೋಗ ಕೈಕೊಳ್ಳಬೇಕು, ಎಂಬುದನ್ನು ಮೊದಲೇ ನಿಶ್ಚಯಿಸಿದ್ದ. ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಜೀವನದ ಪ್ರಶ್ನೆ ಕಠಿಣವಾಗಿದ್ದಷ್ಟು ಸುಲಭವಾಗಿರುತ್ತದೆ. ಕೈಯಿಂದ ಕೆಲಸ ಮಾಡುವವರಿಗೆ ಸುಲಭ; ಲೆಕ್ಕಣಿಕೆ ಹಿಡಿದವರಿಗೆ ಕಠಿಣ.

ಸತ್ಯಪ್ರಕಾಶ ಕೂಲಿಯ ಕೆಲಸ ಮಾಡುವುದು ಕೀಳೆಂದು ಭಾವಿಸಿದ್ದ. ಆತ ತನ್ನ ಗಂಟನ್ನು ಒಂದು ಧರ್ಮಶಾಲೆಯಲ್ಲಿಟ್ಟ. ಬಳಿಕ ಪಟ್ಟಣದ ಮುಖ್ಯ ಸ್ಥಳಗಳನ್ನು ನೋಡಿಕೊಂಡು ಬಂದು ಒಂದು ಅಂಚೆಮನೆಯ ಮುಂದೆ ಬರೆಯುವ ಸಾಮಗ್ರಿಗಳನ್ನಿಟ್ಟುಕೊಂಡು ಕುಳಿತ. ಅನಕ್ಷರಸ್ಥ ಕೂಲಿಕಾರರಿಗೆ

ಕಾಗದ ಬರೆದುಕೊಡುವುದು, ಮನಿಯಾರ್ಡರ ಕಾಗದ ತುಂಬಿ ಕೊಡುವುದು ಆತನ ಉದ್ಯಮವಾಯಿತು. ಪ್ರಾರಂಭಕ್ಕೆ ಆದಾಯ ಅಷ್ಟಿರಲಿಲ್ಲ; ಆದು ಬರು ಬರುತ್ತ ಹೆಚ್ಚಾಯಿತು. ಕೂಲಿಕಾರರೊಡನೆ ಯಾವಾಗಲೂ ವಿನಯದಿಂದ ಮಾತನಾಡುವುದು ಆತನ ರೂಢಿಯಾಯಿತು. ಪತ್ರವನ್ನು ವಿಸ್ತಾರವಾಗಿ ಬರೆ ಯುವ ಇವನ ಚಟದಿಂದಾಗಿ ಕೂಲಿಕಾರರು ಬಹಳ ಹರ್ಷಗೊಳ್ಳುತ್ತಿದ್ದರು. ಆಶಿಕ್ಷಿತರಿಗೆ ಬರೆಸಿದುದನ್ನೆ ಬರೆಸುವ ಚಟ ಹೆಚ್ಚು. ಸತ್ಯಪ್ರಕಾಶ ಪತ್ರವನ್ನು ತಿದ್ದಿ ಚೊಕ್ಕಟವಾಗಿ ಬರೆದು ಅವರನ್ನು ಮುಗ್ಧಗೊಳಿಸುತ್ತಿದ್ದ. ಒಬ್ಬ ಕೂಲಿ ಯವ ಸಂತುಷ್ಟನಾಗಿ ಹೋದರೆ ಅತ ಎಲ್ಲರ ಮುಂದೆಯೂ ಹೇಳುತ್ತಿದ್ದ. ಪ್ರಕಾಶನ ಆದಾಯ ಹೆಚ್ಚುತ್ತಿತ್ತು.

ಒಂದು ತಿಂಗಳು ಕಳೆದುದೇ ತಡ, ಸತ್ಯಪ್ರಕಾಶನಿಗೆ ದಿನಕ್ಕೆ ರೂಪಾಯಿಗೆ ಕಡಿಮೆಯಿಲ್ಲದಷ್ಟು ಗಳಿಕೆಯಾಗತೊಡಗಿತು. ಬಳಿಕ ಆತ ಧರ್ಮಶಾಲೆಯನ್ನು ಬಿಟ್ಟು ಊರಹೊರಗಿನ ಒಂದು ಕೋಠಡಿಯನ್ನು ಬಾಡಿಗೆಗೆ ತೆಗೆದುಕೊಂಡ. ಅದಕ್ಕೆ ಐದು ರೂಪಾಯಿ ಬಾಡಿಗೆ. ಸತ್ಯಪ್ರಕಾಶ ಒಂದು ಹೊತ್ತು ಅಡಿಗೆ ಮಾಡಿದುದನ್ನೇ ಎರಡೂ ಹೊತ್ತು ಉಣ್ಣುತ್ತಿದ್ದ; ಮುಸುರೆಯ ಪಾತ್ರೆಗಳನ್ನು ತಾನೇ ತಿಕ್ಕಿಕೊಳ್ಳುತ್ತಿದ್ದ; ನೆಲದಮೇಲೆ ಮಲಗಿಕೊಳ್ಳುತ್ತಿದ್ದ; ಆದರೆ ಆತನಿಗೆ ತನ್ನ ದೀನತೆಗಾಗಿ ಸ್ವಲ್ಪವೂ ದುಃಖವಾಗುತ್ತಿರಲಿಲ್ಲ; ಆತ ಎಂದಿಗೂ ಮನೆ ಯವರನ್ನು ಸ್ಮರಿಸುತ್ತಿರಲಿಲ್ಲ; ಸಿಕ್ಕಷ್ಟರಲ್ಲಿಯೇ ಸಂತುಷ್ಟನಾಗುತ್ತಿದ್ದ. ಆದರೆ ಸತ್ಯಪ್ರಕಾಶನಿಗೆ ಜ್ಞಾನಪ್ರಕಾಶನು ಮರೆವು ಎಂದಿಗೂ ಆಗುತ್ತಿರಲಿಲ್ಲ. ಆತನ ಅಸಹಾಯ ಘೋರಾಂಧಃಕಾರದಲ್ಲಿ ಆತನೊಬ್ಬನೇ ಸತ್ಯಪ್ರಕಾಶನ ಪಾಲಿಗೆ ಮಿನುಗುವ ತಾರೆಯಾಗಿ ಪರಿಣಮಿಸಿದ್ದ. ವಿಯೋಗದ ಕೊನೆಯ ನೋಟವು ಯಾವಾಗಲೂ ಸತ್ಯಪ್ರಕಾಶನ ಕಣ್ಣಮುಂದೆ ಕಟ್ಟಿರುತ್ತಿತ್ತು.

ಮನಸ್ಸು ಬರಿದಾದಾಗ ಒಮ್ಮೆ ಸತ್ಯಪ್ರಕಾಶ ಜ್ಞಾನಪ್ರಕಾಶನಿಗೆ ಒಂದು ಕಾಗದ ಬರೆದ; ಉತ್ತರವೂ ಬಂದಿತು. ಆತನ ಸಂತೋಷಕ್ಕೆ ಎಲ್ಲೆಯಿದ್ದಂತೆ ತೋರಲಿಲ್ಲ.

ಜ್ಞಾನಪ್ರಕಾಶ ಸತ್ಯಪ್ರಕಾಶನನ್ನು ನೆನೆದು ಅಳುತ್ತಿದ್ದ, ಆತನೊಡನೆ ಇರಲು ಬಯಸುತ್ತಿದ್ದ. ಅಲ್ಲದೆ ಆತನ ಆರೋಗ್ಯವೂ ಚೆನ್ನಾಗಿರಲಿಲ್ಲ.

ಜ್ಞಾನಪ್ರಕಾಶನ ಒಂದೇ ಒಂದು ಕಾಗದದಿಂದ ಸತ್ಯಪ್ರಕಾಶನಿಗೆ

ನೀರಡಿಸಿದವರಿಗೆ ನೀರು ಕುಡಿದಷ್ಟು ಸಂತೋಷವುಂಟಾಯಿತು. ಅದರಿಂದ ಆತ ಮೇಲಿಂದ ಮೇಲೆ, "ನಾನು ಒಬ್ಬಂಟಿಗನಲ್ಲ, ನನ್ನನ್ನು ಪ್ರೀತಿಸುವವನೊಬ್ಬನಿದ್ದಾನೆ; ಸ್ಮರಿಸುವವನೊಬ್ಬನಿದ್ದಾನೆ," ಎಂದುಕೊಳ್ಳುತ್ತಿದ್ದ.

ಸತ್ಯಪ್ರಕಾಶನಿಗೆ ಪತ್ರ ಬಂದಂದಿನಿಂದ, ಜ್ಞಾನಪ್ರಕಾಶನಿಗೆ ಯಾವುದಾದರೂ ಕಾಣಿಕೆ ಕಳಿಸಬೇಕು, ಎಂಬ ಯೋಚನೆ ಬರತೊಡಗಿತು. ಯುವಕರಿಗೆ ಮಿತ್ರರು ಬೇಗ ಕೂಡಿಕೊಳ್ಳುವಂತೆ ಸತ್ಯಪ್ರಕಾಶನಿಗಾದರೂ ಮಿತ್ರರು ಕೂಡಿದರು. ಅವರೊಡನೆ ಅನೇಕ ಸಲ ಚಲನಚಿತ್ರ ಪ್ರದರ್ಶನಕ್ಕೆ ಹೋದ. ಎಷ್ಟೋ ಸಲ ಅವರೊಡನೆ ಭಂಗಿಸೊಪ್ಪು, ಮಾಂಸ, ಮಾದಕ ಪದಾರ್ಥಗಳನ್ನೂ ಸೇವಿಸಿದ.

ಕನ್ನಡಿ, ಹಣಿಗೆ, ಸುವಾಸನೆಯ ಎಣ್ಣೆಗಳೂ ಕೋಣೆಯನ್ನು ತುಂಬಿಕೊಂಡವು. ಕಂಡದ್ದೆಲ್ಲ ಬೇಕಾಗುತ್ತಿತ್ತು ಸತ್ಯಪ್ರಕಾಶನಿಗೆ. ಇವೆಲ್ಲವುಗಳ ಪರಿಣಾಮವಾಗಿ ಅನಾರೋಗ್ಯ ಅನೀತಿಗಳು ಹೆಚ್ಚಿದವು ಆದರೆ ಜ್ಞಾನಪ್ರಕಾಶನ ಪತ್ರ ಇವುಗಳಿಗೆ ಕಾಲ್ತೊಡಕಾಗಿ ಪರಿಣಮಿಸಿತು ಕಾಣಿಕೆ ಕೊಡಬೇಕೆಂಬ ಆಸೆಯಿಂದಾಗಿ ಸತ್ಯಪ್ರಕಾಶ ಒಂದೊಂದಕ್ಕೆ ತಿಲಾಂಜಲಿಯನ್ನೀಯಲು ಮೊದಲು ಮಾಡಿದ. ಮೊದಲು ಚಲನಚಿತ್ರ ನೋಡುವುದು ಬಿಟ್ಟುಕೊಟ್ಟ. ಗೆಳೆಯರೊಡನೆಯೂ ತಲೆತಪ್ಪಿಸತೊಡಗಿದ. ಅರೆಹೊಟ್ಟೆಯಿಂದ ಜೀವಿಸತೊಡಗಿದ. ಧನಸಂಚಯದ ಚಿಂತೆ ತಲೆ ತಿನ್ನತೊಡಗಿತು. ಆತನ ಬಯಕೆ ಒಂದು ಗಡಿಯಾರವನ್ನು ಕಳುಹಿಸಬೇಕೆಂದು. ಬೆಲೆ ಸರ್ವಸಾಧಾರಣ ನಾಲ್ವತ್ತು ರೂಪಾಯಿಗಳವರೆಗೆ ಆಗಬಹುದು. ಮೂರು ತಿಂಗಳವರೆಗೆ ಅಪವ್ಯಯ ನಿಲ್ಲಿಸಿದರೆ ಅಷ್ಟು ಉಳಿತಾಯ ಆಗಬಹುದು. ಜ್ಞಾನಪ್ರಕಾಶನಿಗೆ ಗಡಿಯಾರ ನೋಡಿ ಎಷ್ಟು ಸಂತೋಷವಾದೀತು ? ತಂದೆ ತಾಯಿಗಳೂ ಅದನ್ನು ನೋಡಬಹುದು. ಆಗ ಅವರಿಗೆ ತಾನು ಹಸಿವೆಯಿಂದ ಸಾಯುತ್ತಿಲ್ಲ ಎನಿಸಲಿಕ್ಕಿಲ್ಲವೇ ? ಎಂಬ ನಾನಾ ಯೋಚನೆಗಳು ಅವನ ತಲೆ ತುಂಬಿದ್ದವು. ಉಳಿತಾಯದ ಯೋಚನೆಯಲ್ಲಿ ಅವನು ರಾತ್ರಿ ದೀಪವನ್ನೇ ಹಚ್ಚುತ್ತಿರಲಿಲ್ಲ. ನಸುಕಿನಲ್ಲಿದ್ದು ಕೆಲಸಕ್ಕೆ ಹೋಗುತ್ತಿದ್ದ; ದಿನವೆಲ್ಲ ನಾಲ್ಕೈದು ಬಿಲ್ಲಿಯ ತಿಂಡಿ ತಿಂದು ದಿನ ಸಾಗಿಸುತ್ತಿದ್ದ.

ಅವನೆಡೆಗೆ ಬರುವ ಗಿರಾಕಿಗಳ ಸಂಖ್ಯೆ ಬೆಳೆಯತೊಡಗಿತು. ಸತ್ಯ-

ಪ್ರಕಾಶ ಕಾಗದ ಪತ್ರವನ್ನಷ್ಟೇ ಅಲ್ಲ, ತಾರು ಬರೆಯುವುದನ್ನೂ ಕಲಿತಿದ್ದ. ಹೀಗಾಗಿ ತಿಂಗಳೆರಡರಲ್ಲಿಯೇ ಆತನ ಹತ್ತಿರ ಐವತ್ತು ರೂಪಾಯಿಗಳು ಕೂಡಿದವು. ಅಂತೂ ಕೊನೆಗೊಮ್ಮೆ ಗಡಿಯಾರ ಕಳಿಸಿಕೊಟ್ಟ. ಆಗ ಆತನಿಗೆ ಬಂಜೆಗೆ ಮಗು ಹುಟ್ಟಿದಷ್ಟು ಸಂತೋಷವಾಯಿತು.

೭

'ಮನೆ' ಎಷ್ಟೊಂದು ಕೋಮಲತೆಯ ಪಾವಿತ್ರ್ಯದ ಮನೋಹರತೆಯ ತವರು ಮನೆ. 'ಮನೆ' ಪ್ರೇಮದ ಅರಮನೆ. ಪ್ರೇಮ ಯುಗಯುಗಗಳ ತಪವನ್ನಾಚರಿಸಿ 'ಮನೆ' ಯನ್ನು ಪ್ರತಿಫಲವಾಗಿ ಪಡೆದಿರಬೇಕು.

ಬಾಲ್ಯದಲ್ಲಿ ತಾಯಿ-ತಂದೆ, ಅಕ್ಕ-ತಂಗಿ, ಗೆಳೆಯ-ಗೆಳತಿಯರ ಪ್ರೇಮ ಸೂಸುವ ಸ್ಥಳ 'ಮನೆ'. ಪ್ರೌಢಾವಸ್ಥೆಯಲ್ಲಿ ಹೆಂಡತಿ ಮಕ್ಕಳುಗಳ ಪ್ರೇಮ ಹೊರಹೊಮ್ಮಿಸುವ ತಾಣ 'ಮನೆ'. ಸಂಸಾರಸಾಗರದಲ್ಲಿ ದೊಡ್ಡ ದೊಡ್ಡ ತೆರೆಗಳಲ್ಲಿ ಒಂದಾಗದಂತೆ ಮಾಡುವ ಶಕ್ತಿ 'ಮನೆ'ಯದು. ಜೀವನದ ಸಮಸ್ತ ಬಾಧೆಗಳಿಂದ ಸುರಕ್ಷಿತವಾಗಿರಿಸುವುದು 'ಮನೆ'ಯಲ್ಲವೇ? ಸತ್ಯಪ್ರಕಾಶನ ಮನೆಯೆಲ್ಲಿ? ಕಲಕತ್ತೆಯಲ್ಲಿಯ ಎಡರು-ತೊಡರುಗಳಿಂದ ಆತನನ್ನು ಉಳಿಸಿದ್ದ ಶಕ್ತಿ ಯಾವುದು? ಮಾತೆಯ ಪ್ರೇಮವೇ ಇಲ್ಲವೆ, ತಂದೆಯ ನಲುಮೆಯೋ ಅಥವಾ ಮಕ್ಕಳು-ಮರಿಗಳ ಚಿಂತೆಯ ಬೆಂತರವೇ? ಅಲ್ಲ—ಯಾವುದೂ ಅಲ್ಲ, ಆತನನ್ನು ಉಳಿಸಿದುದು ಒಂದೇ ಒಂದು. ಅದೇ ಆತನ ರಕ್ಷಕನೆನಿಸಿದ, ಉದ್ಧಾರಕನೆನಿಸಿದ ಜ್ಞಾನಪ್ರಕಾಶನ ಸ್ನೇಹ.

ಸತ್ಯಪ್ರಕಾಶ ಆತನಿಗಾಗಿ ಬೇಕಾದುದನ್ನು ಮಾಡಲು ಸಿದ್ಧ. ಅವನಿಗಾಗಿ ದುಡ್ಡಿಗೆ ದುಡ್ಡು ಕೂಡಿಸುತ್ತಿದ್ದ; ಹಣ ಗಳಿಸುವ ಹೊಸ ಹೊಸ ಹಂಚಿಕೆಗಳನ್ನು ಯೋಚಿಸುತ್ತಿದ್ದ. ಒಮ್ಮೆ ಆತನಿಗೆ ಜ್ಞಾನಪ್ರಕಾಶನ ಕಾಗದ ಬಂದಿತು. 'ತಂದೆಯ ಆರ್ಥಿಕ ಪರಿಸ್ಥಿತಿ ಚೆನ್ನಾಗಿಲ್ಲ'ವೆಂದು. ಅಲ್ಲದೆ, 'ದೇವಪ್ರಕಾಶ ಒಂದು ಮನೆ ಕಟ್ಟಿಸುತ್ತಿದ್ದಾರೆ. ವೆಚ್ಚ ಅಳತೆ ಮೀರಿ ಹೋಗಿದೆ. ಅದಕ್ಕಾಗಿ ಸಾಲ ತೆಗೆದುಕೊಂಡಾಗಿದೆ. ಆದುದರಿಂದ ಜ್ಞಾನಪ್ರಕಾಶನಿಗೆ ಮನೆಗೆ ಪಾಠ ಹೇಳಲು ಮೇಷ್ಟ್ರು ಬರುವುದಿಲ್ಲ'ವೆಂದು ಗೊತ್ತಾಯಿತು. ಅಂದಿನಿಂದ ಸತ್ಯ-

ಪ್ರಕಾಶ ಜ್ಞಾನಪ್ರಕಾಶನಿಗೆ ತಿಂಗಳಿಗೆ ಕೆಲವೊಂದು ಹಣ ಕಳಿಸುವುದನ್ನು ನಿರ್ಧರಿಸಿದ.

ಸತ್ಯಪ್ರಕಾಶನೀಗ ಕೇವಲ ಪತ್ರಲೇಖಕನಲ್ಲ. ಬರೆಯುವ ಸಾಮಗ್ರಿಗಳ ಒಂದು ಚಿಕ್ಕ ಅಂಗಡಿಯನ್ನು ತೆರೆದ. ಅದರಿಂದಲೂ ವ್ಯಾಪಾರ ಚೆನ್ನಾಗಿ ಆಗುತ್ತಿತ್ತು.

ಈ ರೀತಿಯಾಗಿ ಐದು ವರುಷಗಳುರುಳಿದವು. ಆತನ ವ್ಯಸನೀಮಿತ್ರರು ಆತನ ಈ ನಡತೆಯನ್ನು ಅರಿತೊಡನೆ ಆತನ ಆಶೆಯನ್ನೇ ತೊರೆದರು.

೮

ಆಗ ತಾನೇ ಸಂಜೆಯಾಗಿತ್ತು. ದೇವಪ್ರಕಾಶರು ಮನೆಯಲ್ಲಿ ಕುಳಿತು ದೇವಪ್ರಿಯೆಯೊಡನೆ ಜ್ಞಾನಪ್ರಕಾಶನ ಮದುವೆಯನ್ನು ಕುರಿತು ಮಾತನ್ನಾಡುತ್ತಿದ್ದರು. ಜ್ಞಾನಪ್ರಕಾಶ ಈಗ ಹದಿನೆಂಟು ವರುಷದ ತರುಣ. ಬಾಲ ವಿವಾಹಕ್ಕೆ ದೇವಪ್ರಕಾಶರ ಸಂಪೂರ್ಣ ವಿರೋಧವಿದ್ದರೂ ಈ ಶುಭ ಸಮಯವನ್ನು ಅವರು ತಪ್ಪಿಸಿಕೊಳ್ಳಲಾರದವರಾಗಿದ್ದರು. ಒಬ್ಬ ಮಹಾಶಯು ಐದು ಸಾವಿರ ರೂಪಾಯಿ ಕೊಡಲೊಪ್ಪಿದುದನ್ನು ಎಂದಾದರೂ ತಪ್ಪಿಸುವುದುಂಟೇ?

"ನಾನಂತೂ ಸಿದ್ಧನಿದ್ದೇನೆ. ಆದರೆ ನಿನ್ನ ಮಗನ ಅಭಿಪ್ರಾಯವೇನು?" ಎಂದುಸುರಿದರು ದೇವಪ್ರಕಾಶ.

"ಮೊದಲು ನೀವು ಮಾತನ್ನಂತೂ ಗಟ್ಟಿಮಾಡಿಬಿಡಿ. ಅವನು ತಾನಾಗಿಯೇ ಸಿದ್ಧನಾಗುವ. ಎಲ್ಲ ಹುಡುಗರೂ ಈಗ 'ಮದುವೆಯಾಗುವುದಿಲ್ಲ' ಎಂದು ಹೇಳುವುದುಂಟು ಆದರೆ ಸಿದ್ಧತೆಯಾದರೆ ಮಾತ್ರ ಬಿಡಲಾರರು."

"ಜ್ಞಾನಪ್ರಕಾಶನ ನಕಾರ ಬರಿಯೆ ಸಂಕೋಚದ ನಕಾರವಲ್ಲ; ಆತ ನಿಶ್ಚಿತವಾಗಿ ಮದುವೆಯಾಗಲಿಕ್ಕಿಲ್ಲ. 'ಅಣ್ಣನ ಮದುವೆಯಾಗದ ವಿನಾ ನಾನು ಮದುವೆಯಾಗಲಾರೆನೆ'ಂದು ಸ್ಪಷ್ಟ ಹೇಳುತ್ತಾನೆ."

"ಅವನದೇನು ನಡೆದೀತು? ಒಪ್ಪೊತ್ತಿಗೆ ಕೂಳಿದ್ದರೆ ಇನ್ನೊಪ್ಪತ್ತಿಗೆ

ತುತ್ತು ಸಹ ಇಲ್ಲ. ಅವನಿಗಾರು ಹೆಣ್ಣು ಕೊಟ್ಟಾರು ? ಅವರನ್ನು ನೋಡಲು ಯಾರಾದರೂ ಹೋಗುವುದುಂಟೆ ? "

" ಹಾಗೆಲ್ಲಾದರೂ ಉಂಟೇ ? ಇಲ್ಲವಾದರೆ ತಿಂಗಳೂ ತಪ್ಪದೆ ನಿನ್ನ ಮಗನ ಹೆಸರಿನಲ್ಲಿ ನಾಲ್ವತ್ತು ರೂಪಾಯಿ ಕಳುಹಿಸುತ್ತಿದ್ದನೇ? ನಿನ್ನ ಮನಸ್ಸು ಆತನ ಬಗ್ಗೆ ಏಕೆ ಇಷ್ಟು ಹೇಯಭಾವನೆ ತಳೆದಿದೆಯೋ ನಾನರಿಯೆ. ಅವನು ತನ್ನ ಜೀವ ಅಡವಿಟ್ಟರೂ ನಿನಗೆ ತೃಪ್ತಿಯಿಲ್ಲ. ಅಲ್ಲವೇ ? "

ದೇವಪ್ರಿಯೆ ಸಿಟ್ಟಾಗಿ ಎದ್ದು ಹೋದಳು. ದೇವಪ್ರಕಾಶರಿಗೆ ಇನ್ನೂ ಹೇಳಬೇಕಾಗಿತ್ತು, ' ಮೊದಲು ಸತ್ಯಪ್ರಕಾಶನ ವಿವಾಹ ಮಾಡೋಣ' ಎಂದು ಆದರೆ ದೇವಪ್ರಿಯೆ ಅನೇಕ ಸಲ ಈ ವಾಕ್ಯವನ್ನು ತಡೆದಿದ್ದಳು; ಅಂದೂ ತಡೆದಳು. ದೇವಪ್ರಕಾಶರು ಸತ್ಯಪ್ರಕಾಶನ ವಿವಾಹ ಮೊದಲು ಆಗುವುದನ್ನು ಹೃದಯಪೂರ್ವಕವಾಗಿ ಬಯಸುತ್ತಿದ್ದರು. ಆದರೆ ಸತ್ಯಪ್ರಕಾಶನಿಗೆ ಇದು ವರೆಗೆ ಅವರು ಒಂದೂ ಕಾಗದವನ್ನು ಬರೆದಿರಲಿಲ್ಲ.

ದೇವಪ್ರಿಯೆ ಎದ್ದು ಹೋದ ಬಳಿಕ ಅವರು ಅದೇ ಮೊದಲನೆಯ ಸಲ, ಸತ್ಯಪ್ರಕಾಶನಿಗೆ ಕಾಗದ ಬರೆಯಲು ಕುಳಿತದ್ದು. ಅಷ್ಟು ದಿನಗಳ ವರೆಗೆ ಕಾಗದ ಬರೆಯದಿದ್ದುದಕ್ಕಾಗಿ ಕ್ಷಮೆ ಬೇಡಿದರು, ಸತ್ಯಪ್ರಕಾಶನಿಗೆ ಬರಲು ಆಗ್ರಹ ಮಾಡಿದರು. "ನನ್ನ ಕೊನೆಯ ಗಳಿಗೆಗಳು ಸಮೀಪಿಸಿವೆ. ನಿನ್ನ ತಮ್ಮನ ಮದುವೆ ಕಣ್ಣು ತುಂಬ ನೋಡಬೇಕೆಂಬ ಆಶೆ ಬಲವಾಗಿದೆ. ಇದನ್ನು ನೀನು ಸ್ವೀಕರಿಸದಿದ್ದರೆ ನನ್ನೆದೆಗೆ ತುಂಬಾ ನೋವು ಉಂಟಾದೀತು. ಕೊನೆಯ ಮಾತಾಗಿ ನನಗಾಗಿ ಅಲ್ಲದಿದ್ದರೂ ನಿನ್ನ ತಮ್ಮ ಜ್ಞಾನಪ್ರಕಾಶನಿಗೋಸುಗ ವಾದರೂ ತಪ್ಪದೆ ಬಾ" ಎಂಬುದನ್ನು ಕಾಣಿಸಿದರು.

ಸತ್ಯಪ್ರಕಾಶನಿಗೆ ಈ ಪತ್ರ ಮುಟ್ಟಿದೊಡನೆ ಬಹಳ ಖೇದವಾಯಿತು. ಆತನ ಭ್ರಾತೃಪ್ರೇಮವು ಈ ರೀತಿಯಾಗಿ ಪರಿಣಾಮಕಾರಿಯಾದೀತೆಂದು ಆತನು ಕನಸಿನಲ್ಲಿಯೂ ಭಾವಿಸಿರಲಿಲ್ಲ. ಆದರೊಡನೆ ' ತನ್ನನ್ನು ಬಿಟ್ಟರೆ ತನ್ನ ತಂದೆತಾಯಿಗಳಿಗೆ ಗತಿಯಿಲ್ಲ,' ಎಂದು ಯೋಚಿಸಿ ಸಂತೋಷದಿಂದ ನಕ್ಕ. ' ಆದರೆ ಅವರಿಗೆ ನನ್ನ ಬಗ್ಗೆ ಏನು ಯೋಚನೆಯಿದ್ದಿತು ? ನಾನು ಸತ್ತರೂ ಅವರೆಂದಾದರೂ ದುಃಖಿಸಬಹುದಿತ್ತೇ ? ಏಳು ವರ್ಷಗಳಾದವು, ಮರೆತಾದರೂ ಒಮ್ಮೆಯೂ ಪತ್ರ ಬರೆಯಲಿಲ್ಲ. ನನಗೊಮ್ಮೆ ಅವರನ್ನು

ಖಂಡಿಸಿ ಕಾಗದ ಬರೆಯಲು ಸುಸಂಧಿ ಸಿಕ್ಕಿತಲ್ಲ! ಜ್ಞಾನಪ್ರಕಾಶನ ಬಗ್ಗೆ ನನ್ನಲ್ಲಿ ಪ್ರೇಮವಿದೆ. ಆದರೆ ಅವನಿಗಾಗಿ ಎಂದು ಮನೆಗೆ ಹೋಗುವ ಆವಶ್ಯಕತೆಯೇನು? ನನ್ನ ಮನೆ ಕಟುಕರ ಮನೆ. ಕಂಡೂ ಕಂಡು ಕೆಸರಲ್ಲಿ ಕಲ್ಲನ್ನೇಕೆ ಎಸೆಯಲಿ? ನಾನು ಗಳಿಸಿ ಉಳಿಸಿದುದನ್ನೆಲ್ಲ ಆತನ ಮದುವೆಗೆಂದು ಕೊಟ್ಟುಬಿಡುವೆ. ಸಾಕು, ಇದಕ್ಕಿಂತ ಏನೂ ಹೆಚ್ಚಿಗೆ ಮಾಡಲಾರೆ. ಜ್ಞಾನಪ್ರಕಾಶ ಮದುವೆ ಮಾಡಿಕೊಳ್ಳಲಿ. ಕುಲವಾದರೂ ಸಾಗೀತು' ಎಂದುಕೊಂಡ.

ಮೂರನೆಯ ದಿನ ಸತ್ಯಪ್ರಕಾಶ ದೇವಪ್ರಕಾಶರಿಗೆ ಐದುನೂರು ರೂಪಾಯಿಗಳನ್ನು ಮನಿಯಾರ್ಡರಿನಿಂದ ಕಳಿಸಿದ. ಅದರೊಡನೆಯೇ, "ತಾವು ನನ್ನನ್ನು ಪುನಃ ಸ್ಮರಿಸಿದುದು ನನ್ನ ಪೂರ್ವಜನ್ಮದ ಪುಣ್ಯ. ಜ್ಞಾನಪ್ರಕಾಶನ ವಿವಾಹವನ್ನು ನಿಶ್ಚಿಂತೆಯಿಂದ ನೆರವೇರಿಸಿರಿ. ಈ ರೂಪಾಯಿಗಳಿಂದ ಮದುಮಗಳಿಗೆ ಒಂದು ಆಭರಣ ಮಾಡಿಸಿಕೊಡಿರಿ. ನನ್ನ ವಿವಾಹದ ಮಾತು ಬದಿಗಿರಲಿ. ಮನೆಯಲ್ಲಿ ನಡೆಯುವ ದಬ್ಬಾಳಿಕೆಯನ್ನು ನೋಡಿಕೊಂಡಿದ್ದೇನೆ. ಅಂದ ಮೇಲೆ ಪುನಃ ತಮ್ಮ ಮನೆಗೆ ಬಂದು ತಮ್ಮನ್ನು ತೊಂದರೆಗೀಡು ಮಾಡುವುದು ಒಳಿತೇ? ನನಗಾಗಿ, ದಯವಿಟ್ಟು ಇನ್ನು ವಿವಾಹದ ಮಾತು ಎತ್ತಬೇಡಿರಿ. ಅದರಿಂದ ನನ್ನ ಹೃದಯಕ್ಕೆ ಆಘಾತಕೊಟ್ಟಂತಾಗುವುದು," ಎಂಬರ್ಥದ ಪತ್ರ ಬರೆದ.

"ತಂದೆತಾಯಿಗಳ ಆಜ್ಞೆಯನ್ನು ಶಿರಸಾವಹಿಸು. ನಾನು ಅಶಿಕ್ಷಿತ, ಮೂರ್ಖ, ತಿಳಿಗೇಡಿ. ನನಗೆ ಮದುವೆಯಾಗುವುದಕ್ಕೆ ಅಧಿಕಾರವಿಲ್ಲ. ನಿನ್ನ ವಿವಾಹಕ್ಕೆ ನಾನು ಬರುವುದು ಸಾಧ್ಯವಿದ್ದಂತೆ ತೋರುವುದಿಲ್ಲ. ಆದರೆ ನಿನ್ನ ವಿವಾಹದಿಂದ ನನಗೆ ಅತ್ಯಾನಂದವಾಗುವುದೆಂಬುದನ್ನು ಮರೆಯಬೇಡ." ಎಂದು ಜ್ಞಾನಪ್ರಕಾಶನಿಗೊಂದು ಪತ್ರ ಬರೆದ.

೯

ದೇವಪ್ರಕಾಶ ಇದನ್ನೋದಿ ಅವಾಕ್ಕಾದರು. ಇನ್ನೊಮ್ಮೆ ಆಗ್ರಹ ಮಾಡುವ ಗೋಜಿಗೇ ಹೋಗಲಿಲ್ಲ. ದೇವಪ್ರಿಯೆಯಂತೂ ಮೂಗೇರಿಸಿ, "ಓಹೋ! ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು. ನಾನೇನೋ

'ನೂರು ಹರದಾರಿಯ ಮೇಲೆ ಇದ್ದಾನೆ. ಬಿರುಸ ಮಾತಿನ ಪ್ರಸಂಗವೇ ಇಲ್ಲ.' ಎಂದುಕೊಂಡಿದ್ದೆ. ಅಲ್ಲಿ ಕುಳಿತುಕೊಂಡರೂ ತನ್ನ ಆಟ ಬಿಟ್ಟಿಲ್ಲವಲ್ಲ;" ಎಂದಳು.

ಆದರೆ ಜ್ಞಾನಪ್ರಕಾಶ ಈ ಪತ್ರವನ್ನೋದಿದ ಬಳಿಕ ಆತನಿಗೆ ಮರ್ಮಾಘಾತವಾದಂತಾಯಿತು. ತಂದೆ ತಾಯಿಗಳ ಬಿರುಸುಮಾತುಗಳೇ ಅವನನ್ನು ಈ ಪ್ರತಿಜ್ಞೆ ಮಾಡುವಂತೆ ಮಾಡಿದವು, ಎಂಬುದುಗೊತ್ತಾಗದೇ ಹೋಗಲಿಲ್ಲ. ಇವರೇ ಆತನನ್ನು ಹೊರಗೆ ಹಾಕಿದ್ದಾರೆ. ಇನ್ನೇಂದಾದರೂ ಆತ ಮನೆಗೆ ಬರಬಹುದೇನು? ಅಮ್ಮ ಅವನ ಮೇಲೆ ಏಕೆ ಇಷ್ಟು ಬೆಂಕಿ ಕಾರಬೇಕು? ಆತ ಬಾಲ್ಯಾವಸ್ಥೆಯಿಂದ ಆಜ್ಞಾಕಾರಿ ವಿನಯಶೀಲನಾಗಿದ್ದನೆಂದು ನನಗೆ ಗೊತ್ತು. ಎಂದಿಗೂ ಯಾವಮಾತೂ ಮೀರುತ್ತಿರಲಿಲ್ಲವಲ್ಲ! ಅಮ್ಮ ನನಗೆಷ್ಟು ರುಚಿರುಚಿಯಾಗಿ ಅಡುಗೆ ಮಾಡಿ ಹಾಕುತ್ತಿದ್ದಳು? ಆದರೆ ಅವನಿಗೆ........? ಈ ರೀತಿಯಾಗಿ ಅನುಭವಗಳಿರುವಾಗ ಆತ ಮನೆ ಬಿಟ್ಟುದರಲ್ಲಿ ಏನು ತಪ್ಪು? ಹಾಗಾದರೆ ನಾನಾದರೂ ಏಕೆ ಈ ಬಲೆಯಲ್ಲಿ ಸಿಕ್ಕುಬೀಳಲಿ? ಈ ತೆರನಾದ ಪರಿಸ್ಥಿತಿ ಒಂದಿಲ್ಲೊಂದು ದಿನ ನನಗೂ ಬಂದೀತು. ಬಹಳ ಯೋಚಿಸಿಯೇ ಅಣ್ಣ ಈ ಮಾರ್ಗ ಸ್ವೀಕರಿಸಿರಬೇಕಲ್ಲವೆ? ಎಂದು ವಿಚಾರಮಾಡಿಯೇ ಮಾಡಿದ. ಆದರೂ ಬಗೆಹರಿಯಲಿಲ್ಲ.

ಸಂಜೆಗೆ ದೇವಪ್ರಿಯೆ-ದೇವಪ್ರಕಾಶರು ಸತ್ಯಪ್ರಕಾಶನ ಪತ್ರದ ವಿಷಯವಾಗಿ ಮಾತನಾಡುತ್ತ ಕುಳಿತಾಗ ಜ್ಞಾನಪ್ರಕಾಶ ಅಲ್ಲಿಗೆ ಬಂದ. "ನಾನು ನಾಳೆ ಅಣ್ಣನ ಕಡೆಗೆ ಹೋಗುವೆ." ಎಂದು ಹೇಳಿದ.

"ಕಲಕತ್ತೆಗೆ ಹೋಗುವೆಯೇನು?" ದೇವಪ್ರಿಯೆ ಕೇಳಿದಳು.

"ಅಹುದು."

"ಆತನನ್ನೇ ಏಕೆ ಇಲ್ಲಿ ಕರೆಯಬಾರದು?"

"ಯಾವ ಮೋರೆಯಿಂದ ಅವನಿಗೆ ಮನೆಗೆ ಬಾ ಎಂದು ಹೇಳಲಿ? ನೀವು ನನ್ನ ಮೋರೆಗೆ ಮಸಿ ಹಚ್ಚಿದ್ದೀರಿ. ದೇವತಾಪುರುಷನೇ ನಿಮ್ಮ ಮನೆಯಲ್ಲಿ ಹುಟ್ಟಿರುವಾಗ ಆತನನ್ನು ಮನೆ ಬಿಟ್ಟು ಹೊರಗೆ ಅಟ್ಟಿದ್ದೀರಿ. ಅವನು ಹಾಗಿರುವಾಗ........"

" ಹೊಂ ಸಾಕು ಮಾಡು. ಮದುವೆ ಮಾಡಿಕೊಳ್ಳುವುದು ಮನಸ್ಸಿನಲ್ಲಿ ಇಲ್ಲದಿದ್ದರೆ ಬಿಡು. ಉರಿಯಲ್ಲಿ ಉಪ್ಪು ಉದುರಿಸಬೇಡ. ತಾಯಿ-ತಂದೆಗಳ ಧರ್ಮವೆಂದು ಹೇಳುತ್ತೇನೆ. ಮದುವೆ ಮಾಡಿಕೋ ಒಳ್ಳೆಯದು. ಇಲ್ಲದಿದ್ದರೆ ನಿನ್ನ ಮನಸ್ಸಿಗೆ ಬಂದುದನ್ನು ಮಾಡು. ಆದರೆ ನನ್ನ ಕಣ್ಣು ಮುಂದೆ ಇರಬೇಡ. "

" ನನ್ನ ಮೋರೆಯನ್ನು ನೋಡುವುದು ಕೂಡ ನಿನಗೆ ಹೇಯವಾಗಿ ಪರಿಣಮಿಸಿತಲ್ಲವೇ ? "

" ನೀನು ನಾವು ಹೇಳಿದುದನ್ನು ಕೇಳುವುದಿಲ್ಲವೆಂದ ಬಳಿಕ ನಿನಗೆ ಬೇಕಾದುದನ್ನು ಮಾಡಿಕೋ. ದೇವರು ನನಗೆ ಮಗನನ್ನೇ ಕೊಟ್ಟಿಲ್ಲವೆಂದು ತಿಳಿದುಕೊಳ್ಳುತ್ತೇನೆ. "

" ಅವನೊಂದಿಗೆ ಏಕೆ ಇಷ್ಟು ಕಠಿಣವಾಗಿ ಮಾತನಾಡುತ್ತೀ " ಎಂದು ದೇವಪ್ರಕಾಶರು ಮಧ್ಯದಲ್ಲೊಂದು ಮಾತು ಸೇರಿಸಿದರು.

" ತಮ್ಮ ಇಚ್ಛೆಯಿದ್ದಂತೆಯಾಗಲಿ " ಜ್ಞಾನಪ್ರಕಾಶ ನುಡಿದ.

ದೇವಪ್ರಕಾಶರಿಗೆ, ಇನ್ನು ಇವನ್ನು ಬಿಟ್ಟರೆ ಸರಿಯಾಗಲಿಕ್ಕಿಲ್ಲ, ಎನಿಸಿತು. ಕೂಡಲೆ ಕಣ್ಣುಸನ್ನೆಯಿಂದ ಜ್ಞಾನಪ್ರಕಾಶನಿಗೆ ಹೋಗಲು ಹೇಳಿ ತಾವು ಪತ್ನಿಯನ್ನು ಸಮಾಧಾನಪಡಿಸತೊಡಗಿದರು. ಆದರೆ ದೇವಪ್ರಿಯೆ ದೊಡ್ಡ ದನಿಯಿಂದ ಅಳತೊಡಗಿದಳು, " ಇಲ್ಲ, ನಾನಿನ್ನು ಅವನ ಮೋರೆಯನ್ನು ನೋಡಲಾರೆ. " ಕೊನೆಗೆ ದೇವಪ್ರಕಾಶರೂ ರೇಗಿಗೆದ್ದರು. ಒದರಿ ಹೇಳಿದರು " ಹಾಗಾದರೆ ಆ ಪರಿಸ್ಥಿತಿಯನ್ನು ತಂದುಕೊಂಡವಳು ನೀನೇ. "

" ಇಲ್ಲ, ತಂದುಕೊಂಡವಳು ನಾನಲ್ಲ. ಆ ಹಾವಿನ ಮರಿ. ದೂರದಲ್ಲಿದ್ದರೂ ಇನ್ನೂ ಫೂತ್ಕರಿಸುತ್ತಲಿದ್ದಾನೆ. ಇದೆಲ್ಲ ನನ್ನನ್ನು ಮಣ್ಣುಗೂಡಿಸಬೇಕೆಂಬ ಉಪಾಯ. ನನ್ನ ಮಗನನ್ನು ನನ್ನಿಂದ ಅಗಲಿಸಲು ಇಷ್ಟೆಲ್ಲ ನಾಟಕ ಹೂಡಿದ್ದಾನೆ. ನನಗೆ ಅವನ ನರ-ನಾಡಿಗಳೆಲ್ಲ ಗೊತ್ತು. ಅವನ ನಾಟಕ ನನ್ನ ಪ್ರಾಣಘಾತಕ. ಇಲ್ಲವಾದರೆ ಎಂದಿಗೂ ಎದುರು ಬೀಳದ ಜ್ಞಾನಪ್ರಕಾಶ ಈಗ ಎದುರು ಬೀಳಬಹುದಾಗಿತ್ತೇ ? "

" ಹೋಗಲಿ ಬಿಡು, ಜ್ಞಾನಪ್ರಕಾಶನೇನು ಮದುವೆ ಮಾಡಿಕೊಳ್ಳದೆ

ಇರುವನೇ ? ಏನೋ ಸಿಟ್ಟಿನಲ್ಲಿ ಮಾಡಿಕೊಳ್ಳುವುದಿಲ್ಲವೆಂದು ಹೇಳಿರಬಹುದು. ನಾನವನನ್ನು ರಮಿಸಿ ಒಪ್ಪಿಸುವೆ."

"ಆದರೆ ಅದು ಸಾಧ್ಯವಿಲ್ಲ."

ದೇವಪ್ರಿಯೆಯ ಈ ಮಾತು ದಿಟವಾಯಿತು. ದೇವಪ್ರಕಾಶರು ಮಗನಿಗೆ "ನೋಡು, ನೀನು ಮದುವೆಯಾಗದಿದ್ದರೆ ನಿನ್ನಮ್ಮ ಶೋಕದಿಂದ ಸಾಯು-ವಳು." ಎಂದು ಹೇಳಿದರು. ಆದರೆ ಎಲ್ಲ ನಿಷ್ಫಲ. ಜ್ಞಾನಪ್ರಕಾಶನ ಬಾಯಿ-ಯಿಂದ ತಪ್ಪಿಯೂ ಕೂಡ "ಹೂಂ" ಎಂದು ಬರಲಿಲ್ಲ. ದೇವಪ್ರಕಾಶರು ಕೊನೆಗೆ ನಿರಾಶರಾದರು.

ಮೂರು ವರ್ಷಗಳ ವರೆಗೆ ವಿವಾಹದ ಪ್ರಶ್ನೆ ಏಳುತ್ತಿತ್ತು, ಮತ್ತೆ ಅಡಗುತ್ತಿತ್ತು. ಜ್ಞಾನಪ್ರಕಾಶ ತನ್ನ ಮಾತು ಕೊನೆಯವರೆಗೂ ಮುರಿಯಲಿಲ್ಲ. ತಾಯಿ ಅಳುಕರೆಗಳೆಲ್ಲ ನಿಷ್ಫಲವಾದವು. ಜ್ಞಾನಪ್ರಕಾಶ ತಾಯಿ ಹೇಳಿದ ಒಂದಕ್ಕೆ ಮಾತ್ರ "ಹೂಂ" ಎಂದ. ಆತ ಕಲಕತ್ತೆಗೆ ಹೋಗಲಿಲ್ಲ.

ಮೂರು ವರ್ಷಗಳಲ್ಲಿ ಮನೆಯ ಸ್ಥಿತಿ ತೀರ ಬದಲಾಯಿತು. ದೇವ-ಪ್ರಿಯೆ ತನ್ನ ಮೂರೂ ಹೆಣ್ಣುಮಕ್ಕಳನ್ನು ಮದುವೆ ಮಾಡಿ ಕೊಟ್ಟಳು. ಮನೆ ಯಲ್ಲಿ ಅವಳೊಬ್ಬಳೇ ಹೆಂಗಸು. ಅವಳ ಪಾಲಿಗೆ ಮನೆಯೆಲ್ಲ ಶೂನ್ಯವಾದಂತಿ-ದ್ದಿತು. ಅವಳಿಗೆ ನಿರಾಶೆ, ಸಿಟ್ಟುಗಳುಂಟಾದಾಗ ಸತ್ಯಪ್ರಕಾಶನನ್ನು ಮನಸ್ವಿ ಯಾಗಿ ಬೈಯುತ್ತಿದ್ದಳು. ಆದರೆ ಸತ್ಯಪ್ರಕಾಶ ಜ್ಞಾನಪ್ರಕಾಶರ ಸ್ನೇಹ ಉಳಿದೇ ಇದ್ದಿತು.

ಬರಬರುತ್ತ ದೇವಪ್ರಕಾಶರಲ್ಲಿ ಔದಾಸೀನ್ಯ ಹೆಚ್ಚಾಗಿ ಕಂಡುಬರತೊಡ ಗಿತು. ಅವರೀಗ ವಿಶ್ರಾಂತಿವೇತನ ಹೊಂದುತ್ತಿದ್ದರು. ಧರ್ಮಗ್ರಂಥಗಳೇ ಈಗ ಅವರ ಜೀವನದ ಸರ್ವಸ್ವಗಳಾಗಿದ್ದವು. ಜ್ಞಾನಪ್ರಕಾಶ ಒಂದು ಶಾಲೆ ಯಲ್ಲಿ ಶಿಕ್ಷಕನಾಗಿ ಕೆಲಸ ಮಾಡುತ್ತಿದ್ದ. ಮನೆಯಲ್ಲಿ ದೇವಪ್ರಿಯೆ ಯೊಬ್ಬಂಟಿಗಳು.

ದೇವಪ್ರಿಯೆ ದಿನಾಲು ಮಗನನ್ನು ಗಾರ್ಹಸ್ಥ್ಯ ಜೀವನದೆಡೆಗೆ ಎಳೆ ಯಲು ಎಳಸುತ್ತಿದ್ದಳು. ಅನೇಕ ಸುಂದರ ವಧುಗಳ ಗುಣಸೌಂದರ್ಯಗಳ ವರ್ಣನೆ ಮಾಡುತ್ತಿದ್ದಳು. ಆದರೆ ಜ್ಞಾನಪ್ರಕಾಶ ಯಾವುದನ್ನೂ ಕಿವಿಯ ಮೇಲೆ ಹಾಕಿಕೊಳ್ಳುತ್ತಿರಲಿಲ್ಲ.

ಬೀದಿಯ ಅನೇಕ ಮನೆಗಳಲ್ಲಿ ಮದುವೆಗಳು ನಡೆಯುತ್ತಿದ್ದವು. ಮಂಗಳೋತ್ಸವಗಳಾಗುತ್ತಿದ್ದವು. ಬೀದಿಯಲ್ಲೆಲ್ಲ ಗೊಂದಲವೇ ಗೊಂದಲ. ಇವನ್ನೆಲ್ಲ ನೋಡಿ ದೇವಪ್ರಿಯೆಯ ಮನಸ್ಸು ಚಂಚಲವಾಯಿತು. ಅವಳಿಗೆ ತಾನೊಬ್ಬಳು ಮಹಾ ದುರ್ದೈವಿ ಎನ್ನಿಸುತ್ತಿತ್ತು. ದೇವರು ತನ್ನ ಹಣೆಯಲ್ಲಿ ಆ ಭಾಗ್ಯ ಬರೆದಿಲ್ಲವೆಂದುಕೊಂಡು ಸಮಾಧಾನಹೊಂದುತ್ತಿದ್ದಳು. ಇಲ್ಲ, ಹಾಗಿಲ್ಲ, ನಾನು ನನ್ನ ಸೊಸೆಯ ಮುಖ ಬೇಗನೆ ನೋಡುವೆ, ನನ್ನ ಮೊಮ್ಮಗಳನ್ನು ಆಡಿಸುವೆ, ಇಂತಹ ಅನೇಕಾನೇಕ ಶುಭ ಪ್ರಸಂಗಗಳು ನಮ್ಮ ಮನೆಯಲ್ಲಿ ಜರುಗುವವು. ಎಂದು ಗಾಳಿಗೋಪುರ ಕಟ್ಟುತ್ತಿದ್ದಳು. ದಿನಾಲು ಹೀಗೆಯೇ ಯೋಚಿಸಿ ಯೋಚಿಸಿ ದೇವಪ್ರಿಯೆ ಹುಚ್ಚಿಯಂತಾದಳು. ಸತ್ಯ-ಪ್ರಕಾಶ ನನ್ನ ಕಾಲಯಮ. ಎಂದು ಪದೆ ಪದೆ ತನ್ನಷ್ಟಕ್ಕೆ ತಾನೇ ಹೇಳಿಕೊಳ್ಳುತ್ತಿದ್ದಳು. ಅಲ್ಲದೆ ಸತ್ಯಪ್ರಕಾಶ ಮನೆಗೆ ಬಂದಿದ್ದಾನೆ, ತನ್ನನ್ನು ಕೊಲ್ಲಲೆಣಿಸುತ್ತಾನೆ,. ಜ್ಞಾನಪ್ರಕಾಶನಿಗೆ ವಿಷ ಹಾಕುವವನಿದ್ದಾನೆ, ಎಂದು ತಿಳಿದುಕೊಳ್ಳುತ್ತಿದ್ದಳು.

ಒಂದು ದಿನ ದೇವಪ್ರಿಯೆ ಸತ್ಯಪ್ರಕಾಶನಿಗೆ ಒಂದು ಕಾಗದ ಬರೆದಳು. ಅದರಲ್ಲಿ "ನೀನು ನನ್ನ ಕುಲದ ವೈರಿ. ನನ್ನ ಪಾಲಿಗೆ ಕಾಲಯಮ. ನೀನು ನನ್ನನ್ನು ಮಣ್ಣುಗೂಡಿಸಬೇಕೆಂದಿರುವಿ ನೀನು ನನ್ನ ಮಗನ ಮೇಲೆ ವಶೀ-ಕರಣ ಮಂತ್ರ ಉಪಯೋಗಿಸಿರುವಿ." ಇನ್ನೂ ಏನೇನೋ ಬೈಗಳಿದ್ದಷ್ಟನ್ನೆಲ್ಲ ಬೈದು ತೀರಿಸಿಕೊಂಡಳು. ಹೀಗೆ ಕಾಗದ ಬರೆಯುವುದು ಅವಳ ನಿತ್ಯಕ್ರಮವಾಯಿತು. ದಿನಕ್ಕೊಂದು ಕಾಗದ ಬರೆಯುತ್ತಿದ್ದಳು. ಒಂದು ಕಾಗದವೂ ಬೈಗಳಿಲ್ಲದೆ ಇಲ್ಲ. ಈ ಪತ್ರಗಳನ್ನು ದಾಸಿಯೊಬ್ಬಳ ಸಹಾಯದಿಂದ ಅಂಚೆ ಮನೆಗೆ ಕಳುಹಿಸುತ್ತಿದ್ದಳು.

## ೧೦

ಜ್ಞಾನಪ್ರಕಾಶ ಶಿಕ್ಷಕನಾಗುವುದು ಸತ್ಯಪ್ರಕಾಶನಿಗೆ ಸರಿಬೀಳಲಿಲ್ಲ. ಏಕೆಂದರೆ "ಬೇರೆ ಊರಲ್ಲಿದ್ದುಕೊಂಡರೂ ತಮ್ಮನಿಗೆ ನೆರವು ನೀಡುತ್ತಿರುವೆನಲ್ಲ!" ಎಂದು ಸತ್ಯಪ್ರಕಾಶ ಸಮಾಧಾನಪಟ್ಟುಕೊಳ್ಳುತ್ತಿದ್ದ. ಈಗ ಅದು

ಹೋಯಿತು. ಜ್ಞಾನಪ್ರಕಾಶ ಅಣ್ಣನಿಗೊಂದು ಕಾಗದ ಬರೆದ. "ನನಗಾಗಿ ಯಾವ ತೊಂದರೆಯನ್ನೂ ತೆಗೆದುಕೊಳ್ಳಬೇಕಾಗಿಲ್ಲ. ನಾನೀಗ ನಾಕಷ್ಟು ಗಳಿಸುತ್ತಿದ್ದೇನೆ."

ಸತ್ಯಪ್ರಕಾಶನ ಅಂಗಡಿಯಲ್ಲಿ ವ್ಯಾಪಾರ ಚೆನ್ನಾಗಿ ಆಗುತ್ತಿದ್ದಿತಾದರೂ ಕಲಕತ್ತೆಯಂತಹ ದೊಡ್ಡ ನಗರಗಳಲ್ಲಿ ಚಿಕ್ಕ ಅಂಗಡಿಯ ಯಜಮಾನ ಸಂಸಾರ ಹಿಡಿತದಿಂದ ಸಾಗಿಸಬೇಕಾಗುವುದು. ಬರಿಯ ಅರವತ್ತು-ಎಪ್ಪತ್ತು ರೂಪಾಯಿಗಳಿಂದ ಆಗಬೇಕಾದುದೇನು? ಸತ್ಯಪ್ರಕಾಶ ಜ್ಞಾನಪ್ರಕಾಶನಿಗೆ ಕಳುಹಿಸುತ್ತಿದ್ದ ಹಣ ಉಳಿತಾಯದಲ್ಲಿಯ ಹಣವಲ್ಲ: ಅದು ಒಂದು ಬರಿಯ ತ್ಯಾಗ.

ಮೊದಲು ಸತ್ಯಪ್ರಕಾಶ ಒಂದು ಕತ್ತಲು ಕೋಣೆಯ ಯಾವುದೋ ಮೂಲೆಯಲ್ಲಿ ಬಿದ್ದುಕೊಂಡು ಒಣ ಊಟ ತಿಂದು ಬಾಳ್ವೆ ನೂಕುತ್ತಿದ್ದ. ಆದರೆ ಈಗ ಒಂದು ಒಳ್ಳೆಯ ಕೋಣೆಯಲ್ಲಿರತೊಡಗಿದ; ಎರಡೂ ಹೊತ್ತು ಊಟ ಉಣ್ಣತೊಡಗಿದ; ಗಟ್ಟಿಯಾದ ಬಟ್ಟೆ ಉಡತೊಡಗಿದ; ಮೊದಲು ಇದ್ದ ಸ್ಥಿತಿಯ ಪರಿಣಾಮವಾಗಿ ಕೆಲವು ದಿನ ಬೇನೆ ಬಿದ್ದ. ಮತ್ತೆ ತಿಂಗಳು ತಿಂಗಳು ವೈದ್ಯರ ಹಣ ತುಸು ತುಸುವಾಗಿ ಕೊಡಬೇಕಾಗುತ್ತಿದ್ದುದರಿಂದ ಮತ್ತೆ ಪೂರ್ವ ಸ್ಥಿತಿ ಬಂದಿತು. ವರುಷಗಳ ವರೆಗಿನ ಈ ಸ್ಥಿತಿಯ ಪರಿಣಾಮವಾಗಿ ಕೆಲವು ರೋಗಗಳು ಸತ್ಯಪ್ರಕಾಶನಿಗೆ ಅಂಟಿಕೊಂಡವು. ಮೇಲಿಂದ ಮೇಲೆ ಜ್ವರ ಬರ ತೊಡಗಿದವು. ಆದರೆ ಮನುಷ್ಯ ತನ್ನ ಜೌವನದಲ್ಲಿ ಯಾವುದಕ್ಕೂ ಲಕ್ಷ್ಯ ವೀಯುವುದಿಲ್ಲ.

ಸತ್ಯಪ್ರಕಾಶ ಯಾವುದಕ್ಕೂ ಲಕ್ಷ್ಯ ಕೊಡುತ್ತಿರಲಿಲ್ಲ. ಪೇಟೆಯಲ್ಲಿಯ ಪೂರಿ-ಪಲ್ಯೆ ತಿನ್ನುತ್ತಿದ್ದ; ಒಮ್ಮೊಮ್ಮೆ ಬೇರೆ ತಿಂಡಿ ತಿಂದು ಚರಿತಾರ್ಥ ಸಾಗಿ-ಸುತ್ತಿದ್ದ. ಸಂಜೆಗೆ ಕೋಣೆಗೆ ಬಂದೊಡನೆ ದಣಿವಾದ ಆತನ ದೇಹಕ್ಕೆ ವಿಶ್ರಾಂತಿ ಬೇಕಾಗುತ್ತಿತ್ತು. ಒಲೆ ಹೊತ್ತಿಸಿ ಅಡಿಗೆ ಮಾಡುವುದು ಬೇಸರವಾಗಿ ನಿದ್ದೆ ಬರುತ್ತಿತ್ತು. ಹಾಗೆಯೇ ಮಲಗಿಕೊಳ್ಳುತ್ತಿದ್ದ. ಇದರಿಂದ ದುಃಖಪಟ್ಟು ಸತ್ಯಪ್ರಕಾಶ ಮೇಲಿಂದ ಮೇಲೆ ಅಳುತ್ತಿದ್ದ. ರಾತ್ರಿ ನಿದ್ದೆ ಸರಿಯಾಗಿ ಆಗು ತ್ತಿರಲಿಲ್ಲ. ಅಲ್ಲದೆ ಸತ್ಯಪ್ರಕಾಶನಿಗೆ ಜ್ಞಾನಪ್ರಕಾಶನ ಪತ್ರ ಬರುವುದು ಕಡಿಮೆಯಾಯಿತು ಬರುವ ಪತ್ರಗಳೂ ನಿರಸ ಪತ್ರಗಳು; ಆದರೆ ಸತ್ಯಪ್ರಕಾ-

ಶನು ಪತ್ರಗಳಲ್ಲಿ ಭಾವನೆ ತುಂಬುತ್ತಿದ್ದ. ಬರುಬರುತ್ತ ಸತ್ಯಪ್ರಕಾಶನಿಗೆ, ಜ್ಞಾನಪ್ರಕಾಶ ನನ್ನನ್ನು ಈಗ ಕಡೆಗಣ್ಣಿನಿಂದ ನೋಡುತ್ತಿದ್ದಾನೆ. ಇಲ್ಲ ವಾದರೆ ಒಮ್ಮೆಯಾದರೂ ನನ್ನ ಕಡೆಗೆ ಬರುತ್ತಿದ್ದ. ನಾನಾದರೋ ಅವನ ಕಡೆಗೆ ಹೋಗುವ ಹಾಗಿಲ್ಲ. ನನ್ನ ಪಾಲಿಗೆ ಮನೆಗೆ ಬೀಗ. ಆದರೆ ಪಾಪಿ! ಅವನಿಗೇನು ಗೊತ್ತು ನನ್ನ ಪ್ರತಿಜ್ಞೆ? ಎಂದೆನಿಸುತ್ತಿತ್ತು. ಈ ಭ್ರಮೆ ಅವನನ್ನು ಹತಾಶನನ್ನಾಗಿ ಮಾಡಿತು.

ನಗರಗಳಲ್ಲಿ ಜನರು ಬಹಳ. ಆದರೆ ಮಾನವತೆಯುಳ್ಳವರು ನೂರಕ್ಕೆ ಐದಾರು ಜನ. ಸತ್ಯಪ್ರಕಾಶನಲ್ಲೀಗ ಒಂದು ಹೊಸ ಆಶೆ ಅಂಕುರಿಸಿತು. ಮನೆಗೆ ಏಕೆ ಹೋಗಬಾರದು? ಒಬ್ಬಳು ಜೀವನದ ಜೊತೆಗಾತಿಯನ್ನಾರಿಸಿ ದರೆ ಚೆನ್ನಲ್ಲವೇ? ಆ ಸುಖ, ಆ ಶಾಂತಿ ಇನ್ನೆಲ್ಲಿ ತಾನೇ ದೊರೆತೀತು? ನನ್ನ ಬಾಳ್ವಾಕೆ ಜೊತೆಗಾತಿಯಿಲ್ಲದೆ ಸಾಗೀತೇ? ಎಂದು ಎನಿಸುತ್ತಿತ್ತು. ಆದರೆ ಮತ್ತೆ ಅದನ್ನು ಒತ್ತಾಯದಿಂದ ದೂಡುತ್ತಿದ್ದ. ಒಂದು ಮಗುವಿನ ಮನಸ್ಸು ತಿಂಡಿಯ ಕಡೆಗೆ ಹರಿಯುವಂತೆ, ಸತ್ಯಪ್ರಕಾಶನಲ್ಲಿ ಈ ಯೋಚನೆ ಮೇಲಿಂದ ಮೇಲೆ ಬರುತ್ತಿತ್ತು. ಬ್ರಹ್ಮ ನನಗೆ ಇದುವರೆಗೆ ಯಾವ ಸುಖ ದಲ್ಲಿರಲೂ ಕಲ್ಪಿಸಿ ಕೊಟ್ಟಿಲ್ಲ ಇಲ್ಲವಾದರೆ ಹೀಗಾಗಬಹುದಿತ್ತೇ? ನಾನು ಉತ್ಸಾಹದಿಂದ ಈ ಕೆಲಸಕ್ಕೆ ಕೈ ಹಾಕಿರದಿದ್ದರೆ ಮೂಲೆಗುಂಪಾಗಿ ಇರು-ತ್ತಿದ್ದೆ; ನನ್ನ ಮಾನವತೆ ನಷ್ಟವಾಗುತ್ತಿದ್ದಿತು. ಆಗಲಿ, ಆದರೆ ಇನ್ನು ಮುಂದೆ ಬ್ರಹ್ಮ ಹೀಗೆ ನನ್ನ ಮೇಲೆ ಅತ್ಯಾಚಾರ ಮಾಡಲಾರ, ಎಂದು ನಾನಾ ಯೋಚನಾತರಂಗಗಳು ಏಳುತ್ತಿದ್ದವು.

ಹೀಗೆ ತಿಂಗಳುಗಟ್ಟಲೆ ಮನಸ್ಸು ಬುದ್ಧಿಗಳಲ್ಲಿ ಘರ್ಷಣೆಯಾಗುತ್ತ ನಡೆಯಿತು. ಒಂದು ದಿನ ಸತ್ಯಪ್ರಕಾಶ ಒಲೆ ಹೊತ್ತಿಸುತ್ತಿರುವಾಗ ಅಂಚೆ-ಯಾಳು ಒಬ್ಬ ಕೂಗಿದ. ಜ್ಞಾನಪ್ರಕಾಶನ ಪತ್ರಗಳ ಹೊರತಾಗಿ ಸತ್ಯಪ್ರಕಾಶ ನಿಗೆ ಮತ್ತಾರ ಪತ್ರಗಳೂ ಬರುತ್ತಿರಲಿಲ್ಲ. ಅಂದೇ ಒಂದು ಜ್ಞಾನಪ್ರಕಾಶನ ಪತ್ರ ಬಂದಿದ್ದಿತು. ಆದರೆ ಈ ಪತ್ರ ಯಾರದು? ಯಾವುದಾದರೂ ಅನಿಷ್ಟ ಸಂಭವಿಸಿದೆಯೋ? ಪತ್ರ ತೆಗೆದುಕೊಂಡು ಓದತೊಡಗಿದ. ಆರಕ್ಷಣದಲ್ಲಿ ಅವನ ಕೈಯಿಂದ ಪತ್ರ ಕೆಳಗೆ ಬಿದ್ದಿತು. ಅವನ ಕಾಲ ಕೆಳಗಿನ ಭೂಮಿ ಕುಸಿದು ಬಿದ್ದಂತಾಯಿತು; ಸತ್ಯಪ್ರಕಾಶ ತಲೆಯ ಮೇಲೆ ಕೈಯಿಟ್ಟುಕೊಂಡು

ಕೂಕ್ಕರಿಸಿದ. ಅದು ದೇವಪ್ರಿಯೆಯಿಂದ ಬಂದ ವಿಷಯುಕ್ತ ಬಾಣ ಸತ್ಯ-ಪ್ರಕಾಶ ಒಂದು ನಿಟ್ಟುಸಿರಿಟ್ಟು ಕುಳಿತ.

ಬಳಿಕ ಸಾವಕಾಶವಾಗಿ ಎದ್ದವನೇ ಒಂದು ಚಾಪೆಯ ಮೇಲೆ ಮಲಗಿಕೊಂಡ. ಮಾನಸಿಕ ದುಃಖದ ಪರಿಣಾಮವಾಗಿ ಕಣ್ಣುಗಳು ಕಣ್ಣೀರು ಮಿಡಿದವು. ಅಯ್ಯೋ! ನನ್ನ ಜೀವನವೆಲ್ಲ ನಾಶವಾಯಿತಲ್ಲ! ನನ್ನನ್ನು ಜ್ಞಾನಪ್ರಕಾಶನ ಶತ್ರುವೆಂದು ಕರೆದರಲ್ಲ! ನಾನು ಇಷ್ಟು ಮಾಡಿದುದೆಲ್ಲ ಅವನನ್ನು ಮಣ್ಣುಪಾಲು ಮಾಡುವುದಕ್ಕಂತೆ! ದೇವಾ, ನೀನೇ ಸಾಕ್ಷಿ, ಎಂದು ಮಿಡುಕಿದ.

ಮತ್ತೆರಡು ದಿನಗಳಾದ ನಂತರ ಮತ್ತೆ ದೇವಪ್ರಿಯೆಯ ಪತ್ರ ಬಂದಿತು. ಸತ್ಯಪ್ರಕಾಶನಿಗೆ ಓದುವ ಧೈರ್ಯವಾಗಲಿಲ್ಲ. ಅದನ್ನು ಹರಿದು ಬಿಸಾಕಿ ಬಿಟ್ಟ. ಮರುದಿನ ಮತ್ತೊಂದು ಪತ್ರ. ಅದರದೂ ಅದೇ ರೀತಿಯಾಗಿ ಕೊನೆಯಾಯಿತು. ದಿನಕ್ಕೊಂದು ಪತ್ರ ಬರುವುದು, ಅದನ್ನು ಹರಿದು ಹಾಕುವುದು; ಸತ್ಯಪ್ರಕಾಶನ ಮರ್ಮಕ್ಕೆ ಪೆಟ್ಟು ತಗಲುತ್ತಿದ್ದಿತು.

ಒಂದು ತಿಂಗಳ ವರೆಗೆ ಈ ಸತತ ಕ್ರಮದಿಂದ ಸತ್ಯಪ್ರಕಾಶನಲ್ಲಿ ಮಾನಸಿಕ ವೇದನೆಯುಂಟಾಯಿತು. ಆತನಿಗೆ ಸಂಸಾರ ಹೇಯವೆನಿಸಿತು. ಆತ ಅಂಗಡಿ ತೆಗೆದುಬಿಟ್ಟ; ಹೊರಗೆ ಹೋಗುವುದನ್ನು ನಿಲ್ಲಿಸಿಬಿಟ್ಟ. ಹಿಂದಿನ ದಿನಗಳು—ಸತ್ಯಪ್ರಕಾಶನ ತಾಯಿ ಅವನೊಡನೆ ಆಟವಾಡುತ್ತಿದ್ದಾಗ ನಡು-ನಡುವೆ ಹೃದಯದ ಆನಂದ ಉಕ್ಕಿ ಬಂದು 'ಮಗು' ಎಂದುಸಿರಿದ, ಅವನ ತಂದೆ ಅವನನ್ನು ಕುಣಿಸಿ ಕುಪ್ಪಳಿಸುತ್ತಿದ್ದ, ನಿರ್ಮಲೆ ಗಂಗಾಸ್ನಾನಕ್ಕೆ ಹೋದ, ಅವನು ತನ್ನ ಮಲತಾಯಿಯ ಬಳಿಗೆ ಹೋದ, ಆಗ ಅವನು ಅಮ್ಮ ಎಂದು ಕೂಗಿದ ದೃಶ್ಯಗಳು ಅವನ ಸ್ಮೃತಿಪಟಲದ ಮೇಲೆ ಮೂಡಿದವು. ಕೂಡಲೆ ಅವಳ ಕಠೋರ ಶಬ್ದಗಳು ನೆನಪಾದವು; ಅವಳ ಕೆಂಗಣ್ಣುಗಳು ಜ್ಞಾಪಕಕ್ಕೆ ಬಂದವು.

ಅವನು ಮನೆಯಲ್ಲಿ ಜ್ಞಾನಪ್ರಕಾಶನನ್ನು ಮುದ್ದಿಡಲು ಯತ್ನಿಸುತ್ತಿದ್ದಾಗ ಅವಳು ಕೊಟ್ಟ ಶಿಕ್ಷೆಗಳೆಲ್ಲ ಜ್ಞಾಪಕಕ್ಕೆ ಬಂದವು. ಆದರೆ? ಮೊದಲು ತನ್ನೊಡನೆ ವ್ಯವಹರಿಸುತ್ತಿದ್ದ, ಬಳಿಕಲೂ ತನ್ನೊಡನೆ ವ್ಯವಹರಿಸುತ್ತಿದ್ದ ತಂದೆಯ ಸ್ವಭಾವ ವೈಷಮ್ಯವೆಷ್ಟು? ತನ್ನ ಮೇಲೆ ತನ್ನ ಮಲತಾಯಿ ದಿನಾಲು

ಸುಳ್ಳು ಅಪರಾಧ ಹೊರಿಸುತ್ತಿದ್ದಳು. ಆವರೆ ತಂದೆಯಾದರೂ ವಿಚಾರ ಮಾಡದಿರುವುದೇ ? ಅವಳು ನಿಜ ಹೇಳಿದಳೆಂದು ನಂಬಿ, ತನ್ನನ್ನು ಶಿಕ್ಷಿಸು ವುದೇ ? ಆಯ್ಯೋ !! ನಾನೇ ಏಕೆ ಸತ್ತುಹೋಗಬಾರದು ?—ಹೀಗೆ ಯೋಚಿಸುತ್ತ ಬಿದ್ದುಕೊಂಡಿರುತ್ತಿದ್ದ.

* * * * *

ಒಂದು ದಿನ ಸಂಜೆ. ಸತ್ಯಪ್ರಕಾಶ ಬಿದ್ದುಕೊಂಡಿರುವಾಗ, ಬಾಗಿಲನ್ನು ಯಾರೋ ಬಡಿಯುತ್ತಿದ್ದ ಸಪ್ಪಳ ಕೇಳಬಂತು. 'ಸತ್ಯಪ್ರಕಾಶ !' ಜೊತೆಗೆ ಕೂಗೂ ಕೇಳಬಂತು. ಸತ್ಯಪ್ರಕಾಶನಿಗೆ ಆಚ್ಚರಿಯಾಯಿತು. ಯಾವುದೋ ಪರಿಚಿತ ದನಿ ! ಕೂಡಲೆ ಎದ್ದು ಓಡುತ್ತ ಬಾಗಿಲು ತೆರೆದ. ಜ್ಞಾನಪ್ರಕಾಶ ! "ಬಾ, ಕುಳಿತುಕೋ" ಸತ್ಯಪ್ರಕಾಶ ಉಪಚರಿಸಿದ. ಜ್ಞಾನಪ್ರಕಾಶನ ಶರೀರ ಕಾಂತಿಪಡೆದಿತ್ತು.

ಸತ್ಯಪ್ರಕಾಶ ಆತನನ್ನು ಬಿಗಿಯಾಗಿ ಅಪ್ಪಿಕೊಂಡ. ಜ್ಞಾನಪ್ರಕಾಶ ಆತನ ಅಪ್ಪುಗೆ ಬಿಡಿಸಿ ಕಾಲು ಹಿಡಿದ. ಕತ್ತಲೆ ಕವಿದಿದ್ದಿತು.

ಜ್ಞಾನಪ್ರಕಾಶ ಕೋಣೆಯ ತುಂಬೆಲ್ಲ ಒಮ್ಮೆ ದಿಟ್ಟಿಯೆಸೆದ; ಸತ್ಯ-ಪ್ರಕಾಶನನ್ನೊಮ್ಮೆ ದಿಟ್ಟಿಸಿ ನೋಡಿದ. ಹೃದಯದ ದುಃಖ ಕಟ್ಟೊಡೆಯಿತು. ತೃಪ್ತಿಯಾಗುವಷ್ಟು ಅತ್ತುಬಿಟ್ಟ.

ಸತ್ಯಪ್ರಕಾಶ ದೀಪ ಹೊತ್ತಿಸಿದ. ಆ ಕೋಣೆ ಕೋಣೆಯಾಗಿರಲಿಲ್ಲ; ಭೂತಗಳ ಆಗರವಾಗಿದ್ದಂತೆ ತೋರಿತು. ಅದು ವರೆಗೆ ಬರಿಯ ಮೈಯಿಂದಿದ್ದ ಸತ್ಯಪ್ರಕಾಶ ಒಂದು ಹರಿದ ಅಂಗಿಯನ್ನು ತೊಟ್ಟುಕೊಂಡ. ಜ್ಞಾನಪ್ರಕಾಶ ನಿಗೆ ಅಣ್ಣನ ಜರ್ಜರ ದೇಹ, ನಿಸ್ತೇಜವಾದ ಮುಖ, ಒಳಕ್ಕೆ ಸೇರಿಕೊಂಡ ಕಣ್ಣುಗಳು ಇನ್ನಷ್ಟು ಅಳು ತರುತ್ತಿದ್ದುವು.

ಸತ್ಯಪ್ರಕಾಶ ಹೇಳಿದ, "ನಾನು ಇತ್ತೀಚೆಗೆ ಬೇನೆ ಬಿದ್ದಿದ್ದೇನೆ."

"ಅದನ್ನಂತೂ ನೋಡುತ್ತಲೇ ಇದ್ದೇನೆ."

"ಬರುವ ಮೊದಲು ಪತ್ರ ಹಾಕಬೇಕಾಗಿತ್ತು, ಕೋಣೆ ಹೇಗೆ ಗೊತ್ತಾಯಿತು ?"

"ಪತ್ರವನ್ನೇನೋ ಬರೆದಿದ್ದೆ, ಆದರೆ ನಿನಗೆ ಮುಟ್ಟಿರಲಿಕ್ಕಿಲ್ಲ. ಅಷ್ಟೇ,"

"ಓಹೋ ಬರೆದಿರಬಹುದು. ಕಾಗದ ಅಂಗಡಿಯಲ್ಲಿಯೇ ಬಿದ್ದಿರಬಹುದು. ನಾನೀಗ ಕೆಲವು ದಿನ ಅಂಗಡಿಗೇ ಹೋಗಿಲ್ಲ. ಮನೆಯಲ್ಲಿ ಎಲ್ಲರೂ ಕುಶಲವಷ್ಟೇ?"

"ಅಮ್ಮ ತೀರಿಕೊಂಡಳು."

"ಆಂ! ಜಡ್ಡಾಗಿತ್ತೇನು?"

"ಇಲ್ಲ, ಏನು ತಿಂದಳೋ ಏನೋ? ಇತ್ತೀಚೆಗೆ ಅವಳು ಹುಚ್ಚಿಯಾಗಿದ್ದಳು. ತಂದೆಯವರು ಒಂದೆರಡು ಸಲ ಕಟುವಾತುಗಳನ್ನಾಡಿದರು. ಅದರಿಂದಾಗಿಯೇ ಏನೋ ತಿಂದಿರಬೇಕು."

"ತಂದೆಯವರು ಕ್ಷೇಮವಷ್ಟೇ?"

"ಇನ್ನೂ ಏನು ತೀರಿಕೊಂಡಿಲ್ಲ"

"ಅಂದರೆ! ಬಹಳ ಜಡ್ಡಾಗಿದೆಯೇನು?

"ಅಮ್ಮ ವಿಷ ತೆಗೆದುಕೊಂಡಳು ಬಳಿಕ ತಂದೆಯವರು ವಿಷ ಇಳಿಯಬೇಕೆಂದು ಔಷಧ ಕುಡಿಸುತ್ತಿದ್ದಾಗ ಅಮ್ಮ ಕಟ್ಟಕಡೆ ಅವನ ಬೆರಳು ಕಚ್ಚಿದಳು." ಅದೇ ವಿಷವೇರಿ ಈಗ ಮೈಯೆಲ್ಲಾ ಬಾತುಕೊಂಡಿದೆ. "ಶುಶ್ರೂಷಾಲಯದಲ್ಲಿ ಬಿದ್ದುಕೊಂಡಿದ್ದಾರೆ. ಹುಚ್ಚು ನಾಯಿಯಂತೆ ಕಂಡಕಂಡವರನ್ನೆಲ್ಲ ಕಚ್ಚಲು ಹೋಗುತ್ತಾರೆ. ಉಳಿಯುವ ಆಶೆಯೇನೂ ಉಳಿದಿಲ್ಲ.

"ಅಂದರೆ ಮನೆಯ ಸರ್ವನಾಶವಾಯಿತಲ್ಲ."

"ಹೀಗೆ ಸರ್ವನಾಶ ಎಂದೋ ಆಗ ಬೇಕಾಗಿದ್ದಿತು."

* * * * *

ಮೂರನೆಯ ದಿನ ಸತ್ಯಪ್ರಕಾಶ ಜ್ಞಾನಪ್ರಕಾಶರಿಬ್ಬರೂ ಮನೆಗೆ ತೆರಳಿದರು.

# ವಿಕ್ರಮ ಸಿಂಹಾಸನ

## ೧

ಜುಮನ ಶೇಖ, ಅಲಗು ಚೌಧರಿಗಳು ಜೀವದ ಗೆಳೆಯರಾಗಿದ್ದರು. ಇಬ್ಬರೂ ಕೂಡಿಯೇ ಹೊಲ ಗದ್ದೆಗಳನ್ನು ಉಳುತ್ತಿದ್ದರು; ಅವರಿಬ್ಬರಲ್ಲಿ ಅಲ್ಪ ಸ್ವಲ್ಪ ಕೊಡಕೊಳ್ಳುವ ವ್ಯವಹಾರವೂ ಬೆಳೆದುಕೊಂಡಿದ್ದಿತು. ಪರಸ್ಪರ ನಂಬುಗೆಯೂ ಹೇರಳವಾಗಿದ್ದಿತು. ಜುಮನರು ಮಕ್ಕಾ ಯಾತ್ರೆಗೆ ಹೋದರೆ ಅಲಗು ಚೌಧರಿಗಳು ಅವರ ಮನೆಯ ತಾತ್ಪೂರ್ತಿಕ ಒಡೆಯರಾಗುತ್ತಿದ್ದರು. ಅಲಗು ಚೌಧರಿಗಳು ಊರಿಗೆ ಹೋದರೆ ಜುಮನ ಶೇಖರು ಅವರ ಮನೆ ನೋಡಿಕೊಳ್ಳುತ್ತಿದ್ದರು. ಆದರೆ ಅವರಿಬ್ಬರಲ್ಲಿ ಊಟದ ವ್ಯವಹಾರ ಮಾತ್ರ ಕಟ್ಟಾಗಿದ್ದಿತು.

ಜುಮನ, ಅಲಗು ಬಾಬುಗಳ ಗೆಳೆತನ ಮೊಳೆತುದು ಎಳೆತನದಲ್ಲಿ. ಜುಮ್ಮನರ ತಂದೆ ಜುಮರಾತಿ ಇವರಿಬ್ಬರ ಗುರುಗಳಾಗಿದ್ದರು. ಅಲಗು ಗುರುಗಳ ಸೇವೆಯನ್ನು ಮನಮುಟ್ಟಿ ಮಾಡುತ್ತಿದ್ದ. ತಾನೇ ಪಾತ್ರೆಗಳನ್ನೂ ತೊಳೆಯುತ್ತಿದ್ದ. ಅವರ ಗುಡುಗುಡಿ ಒಮ್ಮೆಯೂ ವಿಶ್ರಾಂತಿ ತೆಗೆದುಕೊಳ್ಳದಂತೆ ಅರ್ಧ ಮುಕ್ಕಾಲು ತಾಸಿನವರೆಗೆ ಅಭ್ಯಾಸ ಬಿಟ್ಟು, ತಂಬಾಕ ತುಂಬಿ ಕೊಟ್ಟು ಹೋಗುತ್ತಿದ್ದ.

ಅಲಗುವಿನ ತಂದೆ ಸನಾತನ ಸಂಪ್ರದಾಯದವರು. ಅಭ್ಯಾಸಕ್ಕಿಂತ ಹೆಚ್ಚಾಗಿ ಗುರುಗಳ ಶುಶ್ರೂಷೆಯ ಕಡೆಗೆ ಲಕ್ಷವೀಯಬೇಕೆಂಬ ಅಭಿಪ್ರಾಯದವರು. "ವಿದ್ಯೆ ಬರುವುದು ಬರಿಯ ಅಭ್ಯಾಸದಿಂದಲ್ಲ. ಅದಕ್ಕೆ ಗುರುವಿನ ಆಶೀರ್ವಾದ ಬೇಕು. ಆದಕ್ಕಾಗಿ ಗುರುವಿನ ಕೃಪಾದೃಷ್ಟಿ ತನ್ನ ಮೇಲೆ ಬೀಳುವಂತೆ ನೋಡಿಕೊಳ್ಳುವುದು ಪ್ರತಿಯೊಬ್ಬ ಶಿಷ್ಯನ ಕರ್ತವ್ಯ," ವೆಂದು ಅವರು ಹೇಳುತ್ತಿದ್ದರು.

ಆದರೆ ಜುಮರಾತಿಯವರು ಅಂತಹವುಗಳಿಗೆ ಬಗ್ಗುವವರಾಗಿರಲಿಲ್ಲ. ಅವರ ಮನಸ್ಸು ಶಿಷ್ಯರ ವಿದ್ಯೆಯ ಕಡೆಗಿದ್ದಿತೇ ವಿನಾ ತಮ್ಮ ಶುಶ್ರೂಷೆಯ

ಕಡೆಗಿರಲಿಲ್ಲ. ಅವರ ವಿದ್ಯೆಯ ಪ್ರಭಾವದಿಂದ ಸುತ್ತಲೂ ಮೂರು ಗಾವುದದ ಹಳ್ಳಿಗರು ಅವರಿಗೆ ಸನ್ಮಾನವೀಯುತ್ತಿದ್ದರು ಅವರು ಹೇಳಿದುದೇ ವೇದವಾಕ್ಯ ವೆಂದು ಎಲ್ಲರೂ ತಿಳಿಯುತ್ತಿದ ರು.

೨

ಜುಮನರಿಗೆ ಒಬ್ಬ ಮುದುಕಿ ಚಿಕ್ಕಮ್ಮ ಇದ್ದಳು. ಅವಳಿಗೆ ಅಲ್ಪಸ್ವಲ್ಪ ಭೂಮಿಯಿದ್ದಿತು. ಅಲ್ಲದ ಸಮೀಪದ ಸಂಬಂಧಿಕರಾರೂ ಇರಲಿಲ್ಲ.

ಇದನ್ನರಿತು ಜುಮನರು ಅವಳಿಗೆ ಬಹಳ ಹೇಳಿ ಆ ಆಸ್ತಿಯನ್ನೆಲ್ಲ ತಮ್ಮ ಹೆಸರಿಗೆ ಬರೆಯಿಸಿಕೊಂಡರು. ಆ ದಾನ ಪತ್ರದ ರಿಜಿಸ್ಟ್ರಿಯಾಗುವ ವರೆಗೆ ಚಿಕ್ಕಮ್ಮನಿಗೆ ಅತ್ಯುತ್ತಮ ಊಟ ದೊರೆಯುತ್ತಿದ್ದಿತು. ಆದರೆ ರಿಜಿಸ್ಟ್ರಿ ಯಾದ ಬಳಿಕ ಅವಳಿಗೆ ಪ್ರತಿಯೊಂದು ತುತ್ತೂ ಕಣ್ಣೀರಿಲ್ಲದೆ ಇಳಿಯುತ್ತಲೇ ಇರಲಿಲ್ಲ. ಜುಮನರ ಪತ್ನಿ ಕರೀಮಾ ಅವಳಿಗೆ ಒಣರೊಟ್ಟಿ ತಿನ್ನಿಸುತ್ತಿದ್ದಳು. ಬರಬರುತ್ತ ಜುಮನ ಶೇಖರಂತೂ ಅತ್ಯಂತ ನಿಷ್ಠುರರಾದರು. ಚಿಕ್ಕಮ ಹೇಗೋ ದಿನ ನೂಕುತ್ತಿದ್ದಳು.

“ ಈ ಮುದುಕಿ ಬೇಗ ಸಾಯಬಾರದೇ ? ಒಂದರ್ಧ ಯಕರೆ ಬಂಜರು ಭೂಮಿ ಕೊಟ್ಟಿದ್ದಾಳೆ, ಎಷ್ಟಪ್ಪ ಇವಳ ಹಾರಾಟ ? ಮತ್ತೆ ಮೇಲೆ ಬೇಳೆ ಯಿಲ್ಲನೆ ರೊಟ್ಟಿ ಇಳಿಯುವುದಿಲ್ಲವಂತೆ. ಇವಳಿಗೆ ಊಟಕ್ಕೆ ಹಾಕಿದಷ್ಟು ಹಣದಿಂದ ಈ ಊರನ್ನೇ ಕೊಳ್ಳಬಹುದಾಗಿತ್ತು !! ” ಎಂಬ ಕರ್ಕಶ ನುಡಿ ಗಳು ದಿನಾಲು ಕಿವಿಯ ಮೇಲೆ ಬೀಳುತ್ತಿದ್ದವು. ಆದರೆ ಪಾಪ ! ಒಬ್ಬಳೇ ಹೆಣ್ಣುಮಗಳು, ಏನು ತಾನೇ ಮಾಡಿಯಾಳು ?

ಎಲ್ಲವನ್ನೂ ಸಹಿಸುತ್ತಿದ್ದಳು. ಆದರೆ ಎಷ್ಟೆಂದು ಸಹಿಸಬೇಕು ? ಕೊನೆಗೊಮ್ಮೆ ಜುಮನ ಶೇಖರ ಬಳಿಗೆ ಹೋಗಿ ದೂರು ಹೇಳಿದಳು. ಅವರು, “ ನಾನಾದರೂ ಏನು ಮಾಡಲಿ ? ” ಎಂದು ಏನೂ ಅರಿಯದವರಂತೆ ನುಡಿ ದರು. ಮತ್ತೆ ದಿನಗಳುರುಳತೊಡಗಿದವು ಮತ್ತೆ ಅದೇ ಕ್ರಮ ನಡೆಯ ತೊಡಗಿತು. ಒಮ್ಮೆ ಮುದುಕಿ ಚಿಕ್ಕಮ್ಮ ಜುಮನರಿಗೆ, “ ನನ್ನೊಡನೆ ನಿಮ್ಮದು ಹೊಂದುವುದಿಲ್ಲ. ತಿಂಗಳೂ ಕೆಲವೊಂದು ಹಣ ಕೊಡುತ್ತಿರು. ನಾನು ನನ್ನ ಅನ್ನ ಕುಚ್ಚಿಕೊಳ್ಳುತ್ತೇನೆ. ” ಎಂದು ಹೇಳಿದಳು.

ಅತ್ಯಂತ ನಿಷ್ಠುರರಾಗಿ ಜಾಮೂನ ಹೇಳಿದರು, "ನನ್ನ ಅಂಗಳದಲ್ಲಿ ರೂಪಾಯಿಯ ಗಿಡವಿದೆಯೆಂದು ತಿಳಿದುಕೊಂಡಿದ್ದಿಯೇನು ?"

ಅತಿ ನಮ್ರಳಾಗಿ ಚಿಕ್ಕವ್ಮ ಹೇಳಿದಳು, "ಅಂದರೆ ನಾನು ಹಸಿಬಿಸಿ ಯಾದರೂ ಹೊಟ್ಟೆಗೆ ತುಂಬಲೇ ಬೇಡವೇ ?"

"ಆದರೆ ನನ್ನಿಂದ ಸಾಧ್ಯವಿಲ್ಲ."

ಚಿಕ್ಕವ್ಮ ಪಂಚಾಯುತಿ ಹೋಗುವೆನೆಂದು ಬೆದರಿಕೆ ಹಾಕಿದಳು. ಜಾಮೂನರು ನಕ್ಕರು. ಹೇಳಿದರು : "ಓಹೋ, ಆಗಲಿ. ನಮಗೂ ತೊಂದರೆ ತಪ್ಪೀತು ! ನಿರ್ಣಯವಾಗಲಿ. ನಾವೂ ಹೀಗೆ ಹಗಲು ರಾತ್ರಿ ತೊಂದರೆಪಟ್ಟು ಬೇಸತ್ತಿದ್ದೇವೆ."

ಪಂಚಾಯುತಿಯಲ್ಲಿ ತಮಗೆ ಅಪಯಶ ದೊರೆತೀತೆಂದು ಜಾಮೂನರು ಕನಸಿನಲ್ಲಿಯೂ ಯೋಚಿಸಿರಲಿಲ್ಲ. ಏಕೆಂದರೆ ಸುತ್ತಲೂ ನಾಲ್ಕೈದು ಹಳ್ಳಿಗಳಲ್ಲಿ ಪ್ರತಿಯೊಬ್ಬನು ಇವರಿಂದ ಅನುಗ್ರಹಿಸಲ್ಪಟ್ಟಿದ್ದ. ಇವರೊಡನೆ ಹಗೆತನ ಕಟ್ಟಿಕೊಳ್ಳುವುದು ಯಾರಿಗೂ ಬೇಕಾಗಿರಲಿಲ್ಲ. ಇವರೊಡನೆ ಸ್ಪರ್ಧೆಗೆ ನಿಲ್ಲು ವಷ್ಟು ಸಿರಿವಂತ ಒಬ್ಬನೂ ಇರಲಿಲ್ಲ.

೩

ಬಳಿಕ ಎಷ್ಟೋ ದಿನಗಳವರೆಗೆ ಮುದುಕಿ ಚಿಕ್ಕವ್ಮ ಕೈಯಲ್ಲಿ ಕೋಲು ಹಿಡಿದು ಸುತ್ತಲಿನ ಹಳ್ಳಿಗಳಿಗೆ ಹೋಗಿ ಹೋಗಿ ಬಂದಳು. ಅವಳಿಗೆ ಒಂದೊಂದು ಹೆಜ್ಜೆ ಇಡುವುದೂ ಕಠಿಣವಾಗಿತ್ತು. ಆದರೆ ಏನು ಮಾಡಿ ಯಾಳು ? ತನ್ನಂತೆ ನಿರ್ಣಯವೊಂದು ಆಗಬೇಕಲ್ಲ.

ಆದಕ್ಕಾಗಿ ಮುದುಕಿ ಎಲ್ಲರ ಮುಂದೂ ಕಣ್ಣೀರು ಕರೆದು, ತನ್ನ ಕತೆ ಹೇಳಿ ಬರುತ್ತಿದ್ದಳು. ಕೆಲವರು ಕೇಳಿಕೊಂಡು ಸುಮ್ಮನಾಗಿ ಬಿಡುತ್ತಿದ್ದರು. ಕೆಲವರಂತೂ ಮುದುಕಿಗೇ ಬೈಯುತ್ತಿದ್ದರು. "ಒಂದು ಕಾಲು ಮಸಣದಲ್ಲಿ ಇಟ್ಟಿದ್ದಾಳೆ. ಯಾವಾಗ ಸತ್ತಾಳೋ ಹೇಳಬರುವಂತಿಲ್ಲ. ಆದರೆ ಇನ್ನೂ ಆಶೆ ತಪ್ಪಿಲ್ಲ. ಈಗ ನಿನಗೇನಾಗಬೇಕು ? ರೊಟ್ಟಿ ತಿಂದು, ದೇವರ ಸ್ಮರಣೆ ಮಾಡುತ್ತ ಸಾಯಬಾರದೇ ? ಈಗೇತಕ್ಕೆ ನಿನಗೆ ಹೊಲ ಬೇಕು ?" ಎಂದು ಕೆಲವರು ಉಪದೇಶಮಾಡುತ್ತಿದ್ದರು.

ಕೆಲವರಂತೂ ಮುದುಕಿಯನ್ನು ನೋಡಿ ನಕ್ಕು ಅಪಹಾಸ್ಯ ಮಾಡುತ್ತಿದ್ದರು. ಅವಳ ಕರುಣೆಯ ಕತೆ ಕೇಳಿ ಕಣ್ಣೀರು ಮಿಡಿದು, ಸಮಾಧಾನಗೊಳಿಸಿ ಅವಳಿಗೆ ಸಹಾಯ ಮಾಡುವ ನ್ಯಾಯಪ್ರಿಯ, ದಯಾಳು ದೀನವತ್ಸಲರಾರೂ ದೊರೆಯಲಿಲ್ಲ. ತಿರುಗಿ ತಿರುಗಿ ಬೇಸತ್ತು ಮುದುಕಿ ಅಲಗು ಬಾಬುಗಳ ಬಳಿಗೆ ಬಂದಳು. ಕೋಲು ಚೆಲ್ಲಿ, ಉಸ್ಸೆಂದು ಕುಳಿತು, "ನೀನೂ ಪಂಚಾಯತಿ ಸಭೆಗೆ ಬರಬೇಕಪ್ಪ" ಎಂದು ಹೇಳಿದಳು.

"ನನ್ನನ್ನು ಕರೆದು ಏನು ಮಾಡುವಿ? ಬೇರೆ ಬೇರೆ ಊರ ಜನರು ಬಂದೇಬರುವರಲ್ಲ"

"ನನ್ನ ಕಷ್ಟಗಳನ್ನೆಲ್ಲ ಅವರ ಮುಂದೆ ತೋಡಿಕೊಂಡುದಂತೂ ಆಗಿದೆ. ಇನ್ನು ಬರುವುದು ಬಿಡುವುದು ಅವರವರ ಪಾಲಿಗೆ."

"ನಾನು ಪಂಚಾಯತಿ ಸಭೆಗೆ ಬರುವೆ. ಆದರೆ ಅಲ್ಲಿ ತುಟಿ ಬಿಚ್ಚಲಾರೆ."

"ಯಾಕೆ ?"

"ಅದನ್ನು ನಾನೇನು ಹೇಳಲಿ? ಜುಮನ ನನ್ನ ಬಾಲ್ಯಮಿತ್ರ. ಅವನಿಗೆ ಕೆಟ್ಟುದನ್ನು ಹೇಗೆ ಬಯಸಲಿ?"

"ಗೆಳೆತನ ಕೆಟ್ಟುಹೋದಿತೆಂಬ ಭಯದಿಂದ ನ್ಯಾಯವಾದುದನ್ನು ಕೂಡ ಉಸಿರಲಾರೆಯಾ?"

ಅಲಗುವಿಗೆ ಉತ್ತರ ಕೊಡಲಾಗಲಿಲ್ಲ. ಆದರೆ ಅವನ ಮನಸ್ಸು ಅದನ್ನೇ ಒಡನುಡಿಯುತ್ತಿತ್ತು.

"ಗೆಳೆತನ ಕೆಟ್ಟು ಹೋದೀತೆಂಬ ಭಯದಿಂದ ನ್ಯಾಯವಾದುದನ್ನು ಕೂಡ ಊಹಿಸಲಾರೆಯಾ?"

೪

ಅಂದು ಸಂಜೆ ಒಂದು ಗಿಡದ ಬುಡದಲ್ಲಿ ಪಂಚಾಯಿತಿ ಸಭೆ ಕೂಡಿತು. ಜುಮನ ಶೇಖರು ಅಲ್ಲಿ ಎಲ್ಲರಿಗೂ ಸಾಕಾಗುವಷ್ಟು ಜಮಖಾನೆ ಹಾಸಿದ್ದರು. ಅಲ್ಲದೆ ಎಲೆಯಡಿಕೆ ಹೊಗೆಸೊಪ್ಪುಗಳ ವ್ಯವಸ್ಥೆಯನ್ನೂ ಮಾಡಿದ್ದರು. ಆವರು

ಅಲಗು ಬಾಬುಗಳ ಜೊತೆಗೆ ಒಂದೆಡೆ ಕುಳಿತು ಬಂದವರನ್ನೆಲ್ಲ ಸ್ವಾಗತಿಸು ತ್ತಿದ್ದರು. ಹೊತ್ತು ಮುಳುಗಿದೊಡನೆ ಸಭೆ ಪ್ರಾರಂಭವಾಯಿತು ಹಾಸಿದ ಜಮಖಾನೆಗಳಲ್ಲಿ ಸ್ವಲ್ಪವೂ ಸ್ಥಳ ಉಳಿಯಲಿಲ್ಲ. ಜುಮನರು ಕೊಟ್ಟ ಕಷ್ಟ ಗಳಿಗೆ ಸೇಡು ತೀರಿಸಲಿಚ್ಛಿಸಿದ ಮಹಾಶಯರು ಹೆಚ್ಚಾಗಿ ಆಗಮಿಸಿದ್ದರು. ಒಂದು ಮೂಲೆಯಲ್ಲಿ ಬೆಂಕಿ ಹೊತ್ತಿಕೊಂಡಿದ್ದಿತು. ಅದರ ಬದಿಯಲ್ಲಿ ಕೆಲಸಿಗನೊಬ್ಬ ಗುಡುಗುಡಿ ಸೇದುತ್ತಿದ್ದ. ಅವೆರಡರಿಂದಾಗುವ ಹೊಗೆಯಲ್ಲಿ ಸ್ಪರ್ಧೆಯುಂಟಾದಂತೆ ತೋರುತ್ತಿತ್ತು. ಒಂದೆರಡು ಹುಡುಗರು ಅತ್ತಿತ್ತ ಓಡಾಡುತ್ತಿದ್ದರು. ಎಲ್ಲೆಡೆಯಲ್ಲಿ ಗೊಂದಲ ಮನೆ ಮಾಡಿದ್ದಿತು. ಅನ್ನ ಸಂತರ್ಪಣೆ ಇರಬಹುದೆಂದು ನಾಯಿಗಳು ಹಿಂಡು ಹಿಂಡಾಗಿ ಬರುತ್ತಿದ್ದವು.

ಪಂಚರು ಬಂದು ಕುಳಿತುಕೊಂಡರು ಮುದುಕಿ ಚಿಕ್ಕಮ್ಮ, "ಪಂಚರೇ, ನಾನು ಜುಮನನಿಗೆ ನನ್ನ ಹೊಲ ಬರೆದು ಕೊಟ್ಟು ಸುಮಾರು ಮೂರು ವರುಷಗಳಾದವು ಇದು ತಮಗೆ ವಿದಿತವಿದೆ, ಆಗ ಜುಮನ ನನಗೆ ಸಾಕಷ್ಟು ಬಟ್ಟೆ ಒಳ್ಳೆಯ ಊಟ ಕೊಡುವುದಕ್ಕೆ ಒಪ್ಪಿದ. ಆದರೆ ಆತ ಹೇಳಿದಂತೆ ನಡೆಯಲಿಲ್ಲ. ನನಗೆ ಹಗಲಿರುಳು ಬಳಲಿಸಿದ. ನನಗೆ ಹೊಟ್ಟೆತುಂಬ ಊಟ ಮೈ ತುಂಬ ಬಟ್ಟೆ ದೊರೆಯುತ್ತಿಲ್ಲ. ನಾನೊಬ್ಬ ಅನಾಥಳು. ಕೋರ್ಟಿಗೆ ಹೋಗಲು ಸಾಧ್ಯವಿಲ್ಲದೆ ತಮ್ಮ ಹತ್ತಿರ ಬಂದಿದ್ದೇನೆ. ತಮ್ಮೊಡನಲ್ಲದೆ ಇನ್ನಾರೊಡನೆ ತಾನೇ ನಾನು ನನ್ನ ದುಃಖವನ್ನು ತೋಡಿಕೊಳ್ಳಲಿ? ತಾವು ಹೇಳಿದಂತೆ ನಾನು ಕೇಳಲು ಸಿದ್ಧಳು. ನನ್ನಲ್ಲೇನಾದರೂ ತಪ್ಪು ಕಂಡರೆ ನನಗೆ ಮೋರೆಯ ಮೇಲೆ ಹೊಡೆಯಿರಿ. ಜುಮನನ ತಪ್ಪೇನಾದರೂ ಕಂಡುಬಂದರೆ ಆತನಿಗೆ ತಿಳಿಸಿ ಹೇಳಿರಿ. ಪಂಚರ ನಿರ್ಣಯ ನನಗೆ ಶಿರಸಾ ಮಾನ್ಯವಿದೆ." ಎಂದು ಬಿನ್ನವಿಸಿಕೊಂಡಳು.

ರಾಮಧನಮಿಶ್ರ, ತಮ್ಮ ವೈರಿಗಳನ್ನೂ ಕಟ್ಟಿಕೊಂಡಿದ್ದ ಜುಮನರಿಗೆ ಹೇಳಿದರು, "ಜುಮನ, ಯಾರನ್ನು ಪಂಚರನ್ನಾಗಿ ಆರಿಸುತ್ತೀ? ಈಗಲೆ ನಿರ್ಣಯಿಸು. ಇಲ್ಲವಾದರೆ ಪಂಚರು ಹೇಳಿದಂತೆ ಕೇಳಬೇಕಾದೀತು."

ಜುಮನರು ಕುಳಿತಿದ್ದವರಲ್ಲಿ ಒಬ್ಬೊಬ್ಬರನ್ನಾಗಿ ನಿರೀಕ್ಷಿಸಿದರು. ಆದರೆ ಅವರೆಲ್ಲ ಒಂದಿಲ್ಲೊಂದು ಕಾರಣದ ಮೂಲಕ ಇವರಹಗೆಗಳಾಗಿದ್ದವರೇ! ಆಗ, "ಪಂಚರ ನಿರ್ಣಯವೆಂದರೆ, ದೇವರ ಆಜ್ಞೆಯಿದ್ದಂತೆ ಚಿಕ್ಕಮ್ಮ ಬೇಕಾದವ

ರನ್ನು ತಾನೇ ಆರಿಸಲಿ. ನನ್ನದೇನೂ ಅಡ್ಡಿಯಿಲ್ಲ. ” ಎಂದು ಹೇಳಿದರು.

“ ಪಂಚರ ಹೆಸರು ಹೇಳಲ್ಲ ? ನನಗೂ ಗೊತ್ತಾಗಲಿ, ” ಚಿಕ್ಕಮ್ಮ ಗಟ್ಟಿಯಾಗಿ ಹೇಳಿದಳು.

“ ಈಗ ನನ್ನಿಂದ ಹೇಳಿಸಬೇಡ. ನಿನಗೆ ಬೇಕಾದರೆ ನೀನೇ ಆರಿಸು.” ಜುಮನ ಶೇಖರು ಸಿಟ್ಟಿನಿಂದ ಹೇಳಿದರು.

ಚಿಕ್ಕಮ್ಮನಿಗೆ ಅವನ ಆಶಯ ಗೊತ್ತಾಯಿತು.

“ ದೇವರಿಗೆ ಅಂಜು. ಪಂಚರು ಯಾರ ಸ್ನೇಹಿತರೂ ಅಲ್ಲ, ಯಾರ ವೈರಿಗಳೂ ಅಲ್ಲ. ಎಂತಹ ಮಾತನಾಡುವಿ ? ನಿನಗೆ ಯಾರ ಮೇಲೂ ವಿಶ್ವಾಸ ವಿರದಿದ್ದರೆ ಬಿಡು ಅಲಗು ಚೌಧರಿಯನ್ನೊಪ್ಪುವೆಯಾ ? ನಾನು ಅವನನ್ನು ಪಂಚರಲ್ಲಿ ಮುಖ್ಯನನ್ನಾಗಿ ಮಾಡುತ್ತೇನೆ. ” ಚಿಕ್ಕಮ್ಮ ಹೇಳಿದಳು.

ಜುಮನರಿಗೆ ಆದ ಸಂತೋಷ ಹೊಟ್ಟೆ ಹಿಡಿಸದಾಯಿತು. “ನನ್ನದೇನೂ ಅಡ್ಡಿಯಿಲ್ಲ ” ಎಂದು ಹೇಳಿದರು.

ಅಲಗು ಚೌಧರಿಬಾಬುಗಳಿಗೆ ಈ ಜಾಲದಲ್ಲಿ ಸಿಕ್ಕಿಕೊಳ್ಳುವುದು ಬೇಕಾಗಿರಲಿಲ್ಲ. ಅವರಿಗೆ ತಪ್ಪಿಸಿಕೊಂಡರೆ ಸಾಕಾಗಿತ್ತು. ಹೇಳಿದರು, “ ಚಿಕ್ಕಮ್ಮ, ನಾನೂ ಜುಮನನೂ ಜೀವದ ಗೆಳೆಯರೆಂದು ನಿನಗೆ ಗೊತ್ತಷ್ಟೇ?”

ಚಿಕ್ಕಮ್ಮ ಗಂಭೀರ ಸ್ವರದಲ್ಲಿ ಹೇಳಿದಳು, “ ಗೆಳೆತನಕ್ಕಾಗಿ ನ್ಯಾಯವನ್ನು ಮಾರಿಕೊಳ್ಳುವವನಾರೂ ಇರುವುದಿಲ್ಲ. ಪಂಚರ ಮನದಲ್ಲಿ ದೇವರು ಅಡಗಿರುತ್ತಾನೆ. ಪಂಚರ ಬಾಯಿಯಿಂದ ಹೊರಡುವ ಶಬ್ದವೆಲ್ಲವೂ ದೇವರ ಮಾರ್ದನಿ. ”

ಅಲಗು ಬಾಬುಗಳು ಸರಪಂಚರಾದರು. ರಾಮಧನಮಿಶ್ರರು ಹಾಗೂ ಜುಮನರ ಇತರ ವಿರೋಧಿಗಳು ಮುದುಕಿಯನ್ನು ಮನದಲ್ಲಿಯೇ ಬಹಳವಾಗಿ ಹಳಿದರು.

ಅಲಗು ಚೌಧರಿಗಳು ಹೇಳಿದರು, “ ಜುಮನಶೇಖ ! ನಾನೂ ನೀನೂ ಬಾಲ್ಯದ ಗೆಳೆಯರು. ಅವಶ್ಯವಿದ್ದಾಗ ನೀನು ನನಗೆ ಸಹಾಯಮಾಡಿರುವೆ. ನಿನಗೆ ಅವಶ್ಯವಿದ್ದಾಗ ನಾನು ನಿನ್ನೊಡನೆ ಸಹಕರಿಸಿದ್ದೇನೆ. ಆದರೆ ಈಗ ನೀವಿಬ್ಬರೂ ನನ್ನ ದೃಷ್ಟಿಯಲ್ಲಿ ಸಮಾನರು. ಇನ್ನು ನೀವು ಹೇಳಲಿರುವುದನ್ನೆಲ್ಲ ಹೇಳಿರಿ. ”

ಇದರಲ್ಲಿ ತಾವೇ ಗೆಲ್ಲುವೆವೆಂದು ಜುಮನ ಶೇಖರಿಗೆ ಸಂಪೂರ್ಣ ವಿಶ್ವಾಸ ವಿದ್ದಿತು. ಅಲಗು ಬಾಬುಗಳ ಈ ಹೇಳಿಕೆಯೆಲ್ಲ ಬರಿಯ ತೋರಿಕೆಗಾಗಿ ಮಾತ್ರ ಎಂದವರು ಬಗೆದರು. "ಪಂಚರೇ, ಚಿಕ್ಕಮ್ಮ ತನ್ನ ಹೊಲವನ್ನು ನನ್ನ ಹೆಸರಿಗೆ ಮಾಡಿ ಮೂರು ವರುಷಗಳು ಸಂದವು. ನಾನವಳಿಗೆ ವೇಳೆ-ವೇಳೆಗೆ ಊಟ ಬಟ್ಟೆ ಒದಗಿಸುತ್ತಿದ್ದೆ. ನಾನವಳಿಗೆ ಇದುವರೆಗೆ ಎಂದೂ ತೊಂದರೆಯಿತ್ತಿಲ್ಲವೆಂದು ದೇವರ ಸಾಕ್ಷಿಯಿಟ್ಟು ಹೇಳುತ್ತೇನೆ. ನಾನವಳನ್ನು ನನ್ನ ತಾಯಿಗೆ ಸಮಾನಳೆಂದು ತಿಳಿಯುತ್ತೇನೆ. ಅವಳ ಸಂರಕ್ಷಣೆ ಮಾಡುವುದು ನನ್ನ ಕರ್ತವ್ಯವಾಗಿದೆ. ಆದರೆ ಹೆಂಗುಸರಲ್ಲಾದ ಜಗಳಾಟಕ್ಕೆ ನಾನು ಹೊಣೆಯಲ್ಲ. ಈಗ ಚಿಕ್ಕಮ್ಮ ತಿಂಗಳ ವೆಚ್ಚವನ್ನು ಬೇರೆಯಾಗಿ ಬೇಡುತ್ತಾಳೆ. ಭೂಮಿಯ ಉತ್ಪನ್ನ ಪಂಚರಿಗೆ ವಿದಿತವಿದೆ. ಅದರಿಂದ ಅವಳಿಗಾಗುವಷ್ಟು ತಿಂಗಳ ವೆಚ್ಚವನ್ನು ಪ್ರತ್ಯೇಕವಾಗಿ ಕೊಡುವುದು ನನಗೆ ಸಾಧ್ಯವಿಲ್ಲ. ಅದರಲ್ಲಿ ತಿಂಗಳ ವೆಚ್ಚದ ಉಲ್ಲೇಖವಿಲ್ಲ. ಹಾಗೆ ಮೊದಲೇ ತಿಳಿಸಿದ್ದರೆ ನನಗೆ ಈ ಜಾಲವಲ್ಲಿ ಸಿಲುಕುವುದು ಬೇಕಾಗಿರಲಿಲ್ಲ. ಇಷ್ಟೇ ನನ್ನ ಹೇಳಿಕೆ. ಇನ್ನು ಪಂಚರ ಮನಸ್ಸು. ಅವರ ನಿರ್ಣಯದಂತೆ ನಡೆಯುವೆ. ಎಂದವರು ಹೇಳಿಕೆಯನ್ನಿತ್ತರು.

ಅಲಗು ಚೌಧರಿ ಬಾಬುಗಳಿಗೆ ಅನೇಕಸಲ ಕೋರ್ಟಿಗೆ ಹೋಗಬೇಕಾಗುತ್ತಿದ್ದಿತು. ಆದುದರಿಂದ ಅವರಿಗೆ ಕಾನೂನುಗಳು ಗೊತ್ತಿದ್ದವು.

ಅಲಗು ವಿಚಾರಣೆ ಪ್ರಾರಂಭಿಸಿದರು. ಒಂದೊಂದು ಪ್ರಶ್ನೆಯಿಂದಲೂ ಜುಮನರಿಗೆ ಎದೆಯ ಮೇಲೆ ಸುತ್ತಿಗೆಯೇಟು ಕೊಟ್ಟಂತಾಗುತ್ತಿತ್ತು. ರಾಮಧನಮಿಶ್ರ ಈ ಪ್ರಶ್ನೆಗಳಿಂದ ಮುಗ್ಧರಾಗುತ್ತಿದ್ದರು. ಅಲಗು ಹೀಗೇಕೆ ಬದಲಾಗಿ ಹೋದ ಎಂದು ಜುಮನರಿಗೆ ಯೋಚನೆ ಹತ್ತಿತು. "ಈಗ ನನ್ನೊಡನೆ ಕುಳಿತು ಚಕ್ಕಂದದಿಂದ ಹರಟೆ ಹೊಡೆಯುತ್ತಿದ್ದ. ಆದರೆ ಈಗ ನನ್ನನ್ನು ಬೇರುದರಿಸಲಿ ಉರುಳಿಸುವ ಪ್ರಯತ್ನ ನಡೆಸಿದ್ದಾನಲ್ಲ! ಎಂದಿನ ಸೇಡನ್ನು ಇಂದು ತೀರಿಸುತ್ತಿರಬಹುದು? ಇಷ್ಟು ದಿನಗಳ ಮಿತ್ರತ್ವವೆಲ್ಲ ಮಣ್ಣುಗೂಡಿತೇ?" ಎಂದು ಅವರು ಯೋಚಿಸತೊಡಗಿದರು.

ಜುಮನರು ಹೀಗೆ ಯೋಚನಾಮಗ್ನರಾಗಿರುವಾಗ ಅಲಗು ಬಾಬುಗಳು ನಿರ್ಣಯ ಹೊರಪಡಿಸಿದರು. "ಜುಮನಶೇಖ! ಪಂಚರು ಈ ವಿಷಯದ

ಮೇಲೆ ಚೆನ್ನಾಗಿ ವಿಚಾರ ಮಾಡಿದರು. ಮುದುಕಿ ಚಿಕ್ಕಮ್ಮನಿಗೆ ತಿಂಗಳ ವೆಚ್ಚವನ್ನು ನೀನು ಕೊಡಬೇಕೆಂದು ಅವರ ಆಶಯ. ಚಿಕ್ಕಮ್ಮನ ಉತ್ಪನ್ನ ಅವಳ ತಿಂಗಳ ವೆಚ್ಚ ಹೊರಡದಷ್ಟೇನೂ ಕಡಿಮೆಯಿಲ್ಲ ಇಷ್ಟೇ ನಮ್ಮ ನಿರ್ಣಯ. ನಿಮಗೆ ವೆಚ್ಚ ವಹಿಸುವುದು ಸಾಧ್ಯವಿಲ್ಲದಿದ್ದರೆ, ಆ ದಾನಪತ್ರ ರದ್ದಾದುದೆಂದು ತಿಳಿಯುವೆವು. ”

೫

ಈ ನಿರ್ಣಯ ಕೇಳಿ ಜುಮನರ ಕಾಲು ನಡುಗಿ ಹೋದವು. ಜೀವದ ಗೆಳೆಯನಾಗಿದ್ದವನು ಹಗೆಯಾಗಿ ತನ್ನ ಕುತ್ತಿಗೆ ಕೊಯ್ದನಲ್ಲ! ತಾವು ಸಂಪೂರ್ಣ ನಂಬಿಗೆಯಿಟ್ಟ ಗೆಳೆಯ ತಮಗೆ ಅಹಿತ ಬಯಸುವನೆಂದು ಯಾರಾದರೂ ಯೋಚಿಸಿಯಾರೇ? ಇಂತಹ ಸಮಯಗಳಲ್ಲಿಯೇ ನಿಜವಾದ ಗೆಳೆತನದ ಪರೀಕ್ಷೆಯಾಗುತ್ತದೆ. ಇದೇ ಕಲಿಯುಗದ ಆದರ್ಶ ಗೆಳೆತನವೇ? ಈ ಜನ ಹೀಗೆ ಕಪಟಿಗಳೂ ಮೋಸಗಾರರೂ ಆಗಿರದಿದ್ದರೆ, ದೇಶದಲ್ಲಿ ಆಪತ್ತುಗಳೇಕೆ ಒದಗುತ್ತಿದ್ದವು?

ಆದರೆ ರಾಮಧನ ಮಿಶ್ರ ಹಾಗೂ ಇತರ ಪಂಚರು ಚೌಧರಿ ಬಾಬುಗಳ ನೀತಿಪರಾಯಣತೆಯನ್ನು ಮನಬಿಚ್ಚಿ ಹೊಗಳುತ್ತಿದ್ದರು. “ ಇದೇ ನಿಜವಾದ ನ್ಯಾಯ! ಹಾಲಿನದು ಹಾಲಿಗೆ, ನೀರಿನದು ನೀರಿಗೆ. ಗೆಳೆತನ ಎಲ್ಲಿ ಬೇಕೋ ಅಲ್ಲಿ ಮಾತ್ರ. ಧರ್ಮಪಾಲನೆ ಮುಖ್ಯವಾದುದು. ಇಂತಹ ಸತ್ಯವಾದಿಗಳಿಂದಲೇ ಜಗತ್ತು ನಡೆದಿದೆ. ಇಲ್ಲವಾದರೆ ಎಂದೋ ರಸಾತಲಕ್ಕಿಳಿದು ಹೋಗುತ್ತಿದ್ದಿತು.” ಎಂದು ಅವರು ಹೇಳುತ್ತಿದ್ದರು.

ಈ ನಿರ್ಣಯ ಅಲಗು ಜುಮನರ ಗೆಳೆತನದ ಬೇರು ಅಲ್ಲಾಡಿಸಿ ಬಿಟ್ಟಿತು. ಅವರು ತಮ್ಮತಮ್ಮಲ್ಲಿ ಮಾತನಾಡುವುದನ್ನು ಬಿಟ್ಟರು. ಇಷ್ಟೊಂದು ದಿನಗಳ ವರೆಗೆ ಬಳೆದುಬಂದ ಗೆಳೆತನ ಸತ್ಯತೆಯ ಒಂದು ಸುಳಿಗಾಳಿಗೆ ನಾಶವಾಗಿ ಹೋಯಿತು.

ಬಳಿಕ ಅವರ ಮಿತ್ರತ್ವ ಒಂದು ತೋರಿಕೆಯ ಮಿತ್ರತ್ವವಾಗಿ ಪರಿಣಮಿಸಿತು. ಇಬ್ಬರೂ ಪರಸ್ಪರ ಆದರ ಸತ್ಕಾರ ಮಾಡುವಂತೆ ನಟಿಸುತ್ತಿದ್ದರು. ಆದರೆ ಅವರಿಬ್ಬರ ಕೂಟ ಬೆಕ್ಕು-ಇಲಿಗಳ ಕೂಟವಾಗಿತ್ತು.

ಜುಮನರ ಮನಸ್ಸಿನಲ್ಲಿ ಗೆಳೆಯನ ಕುಟಿಲತೆ ಯಾವಾಗಲೂ ಕಟಿಯು

ತ್ತಿತ್ತು. ಸೇಡು ತೀರಿಸಿಕೊಳ್ಳಲು ಯಾವುದಾದರೂ ಸಂಧಿ ದೊರೆತೀತೇ? ಎಂದು ಅವರು ಯಾನಾಗಲೂ ಯೋಚಿಸುತ್ತಿದ್ದರು.

೬

ಒಳ್ಳೆಯ ಕೃತ್ಯಗಳ ಸಿದ್ಧಿಯಾಗಬೇಕಾದರೆ ತಗಲುವ ವೇಳೆ ಹೆಚ್ಚು. ಆದರೆ ದುಷ್ಕೃತ್ಯಗಳನ್ನು ಸಾಧಿಸುವುದಕ್ಕೆ ಸ್ವಲ್ಪವೂ ವೇಳೆ ತಗಲುವುದಿಲ್ಲ. ಅವರಂತೆ ಜುಮುನಸರಿಗೆ ಅಲಗು ಬಾಬುಗಳ ಮೇಲೆ ಸೇಡು ತೀರಿಸಲು ಶೀಘ್ರ ಡಲ್ಲಿಯೇ ಒಂದು ಸುಸಂಧಿ ದೊರೆಯಿತು.

ಹಿಂದಿನ ವರುಷ ಅಲಗು ಬಾಬುಗಳು ಒಂದು ಜತೆ ಎತ್ತು ಕೊಂಡು ತಂದಿದ್ದರು. ದೃಷ್ಟಿ ಹತ್ತುವಂತಹ ಎತ್ತುಗಳವು. ಸಮೀಪದ ಹಳ್ಳಿಗಳ ಜನರೆಲ್ಲ ಬಂದು ನೋಡಿ ಹೋಗುತ್ತಿದ್ದರು. ದೈವಯೋಗದಿಂದ ಈ ಪಂಚಾ-ಯಿತಿಯಾದ ತಿಂಗಳಲ್ಲೇ ಅವೆರಡರಲ್ಲೊಂದು ಎತ್ತು ಸತ್ತಿತು. ಅದನ್ನು ನೋಡಿ ಜುಮುನಸರು ತಮ್ಮ ಮಿತ್ರರಿಗೆ ಹೇಳುತ್ತಿದ್ದರು, "ನೋಡಿ, ಇದೆಲ್ಲ ಮೋಸಗಾರಿಕೆಯ ಫಲ. ದೇವರು ಒಳ್ಳೆಯದು-ಕೆಟ್ಟದು ನೋಡಿ ತಕ್ಕು ದನ್ನು ಮಾಡುತ್ತಾನೆಂಬುದೇನು ಸುಳ್ಳೇ?" ಅಲಗು ಬಾಬುಗಳಿಗೆ 'ಜುಮುನಸನೇನಾದರೂ ವಿಷ ತಿನ್ನಿಸಿರಬಹುದೇ?' ಎಂಬ ಸಂದೇಹಬಂದಿತು. ಚೌಧರಿಗಳ ಹೆಂಡತಿಗೂ ಹೀಗೆಯೇ ಸಂಶಯವೆನಿಸಿತು. ಇದರಿಂದ ಚೌಧರಿ ಗಳ ಹೆಂಡತಿಗೂ ಕರೀಮಳಿಗೂ ಒಂದು ದೊಡ್ಡ ಯುದ್ಧವೇ ಎಸಗಿತು. ಇಬ್ಬರೂ ದೇವಿಯರು ತಮ್ಮ ಶಬ್ದ ಭಾಂಡಾರದ ನದಿ ಹರಿಸಿದರು. ವ್ಯಂಗ ವಕ್ರೋಕ್ತಿ, ಅನ್ಯೋಕ್ತಿ ಉಪಮೆ ಮೊದಲಾದ ಅಲಂಕಾರಗಳಲ್ಲಿ ಜಗಳವೆಸ ಗಿತು. ಜುಮುನರು ಹೇಗೋ ಜಗಳ ನಿಲ್ಲಿಸಿ ತಮ್ಮ ಮಡದಿಯನ್ನು ಮನೆಗೆ ಕರೆದುಕೊಂಡು ಹೋದರು. ಅತ್ತ ಅಲಗು ಬಾಬುಗಳು ತಮ್ಮ ಮಡದಿಯನ್ನು ಸಂತಯಿಸತೊಡಗಿದರು.

ಆದರೆ ಈಗ ಒಂದೇ ಎತ್ತನ್ನು ತೆಗೆದುಕೊಂಡು ಮಾಡುವುದೇನಿದೆ? ಅದಕ್ಕೆ ಒಂದು ತಕ್ಕ ಎತ್ತು ಹುಡುಕಬೇಕಲ್ಲ? ತಕ್ಕ ಎತ್ತು ಸಿಕ್ಕದೆ ಹೋಯಿತು. ಕೊನೆಗೆ ಅದನ್ನು ಮಾರಬೇಕೆಂದು ಸಿಧ್ಧಾಂತವಾಯಿತು.

ಅದೇ ಊರಿನಲ್ಲಿ ಒಬ್ಬ ಸಿರಿವಂತ ವ್ಯಾಪಾರಿಯಿದ್ದರು. ಅವರದೊಂದು ಒಂಟೆತ್ತಿನ ಗಾಡಿಯಿದ್ದಿತು. ಅವರು ಪೇಟೆಯ ಊರಿಗೆ ಆ ಗಾಡಿಯ ಮೂಲಕ

ಬೆಲ್ಲ-ತುಪ್ಪ ಸಾಗಿಸುತ್ತಿದ್ದರು. ಪೇಟೆಯಿಂದ ಎಣ್ಣೆ ಉಪ್ಪು ತಂದು ಊರಿನಲ್ಲಿ ಮಾರುತ್ತಿದ್ದರು. ಅಲಗು ಬಾಬುಗಳ ಎತ್ತನ್ನು ಕೊಳ್ಳಬೇಕೆಂದು ಅವರು ಬಯಸಿದರು. ಏಕೆಂದರೆ, 'ದಿನಕ್ಕೆ ಕಡಿಮೆಯೆಂದರೆ ಮೂರು ಸಲವಾದರೂ ಹೋಗಿ ಬಂದು ಮಾಡಬಹುದು,' ಎಂದು ಅವರು ಯೋಚಿಸಿದರು. ಈಗ ದಿನಕ್ಕೆ ಒಂದು ಸಲ ತರಬೇಕಾದರೆ ರಾತ್ರಿಯಾಗುತ್ತದೆ. ಇದರಿಂದ ಅನಾಯಾಸ ವಾಗಿ ಹೊತ್ತು ಮುಳುಗುವುದಕ್ಕೆ ಮೊದಲು ಮೂರು ಸಲ ತರಬಹುದಲ್ಲ, ಎಂದವರು ಬಗೆದರು.

ಅವರು ಎತ್ತು ನೋಡಿದರು, ಸ್ವಲ್ಪ ದೂರ ಓಡಿಸಿದರು, ಸುಳಿ ಪರೀಕ್ಷಿಸಿ ದ್ದಾಯಿತು. ಕೊನೆಗೆ ಬೆಲೆ ಮಾಡಿ ತಮ್ಮ ಮನೆಯಲ್ಲಿ ತಂದು ಕಟ್ಟಿಕೊಂಡರು. ಹಣ ಒಂದು ತಿಂಗಳಾದ ಬಳಿಕ ಮುಟ್ಟಿಸುವುದಾಗಿ ಹೇಳಿದರು

ಚೌಧರಿಗಳಿಗೂ ಹಣದ ಆವಶ್ಯಕತೆಯಿದ್ದಿರಲಿಲ್ಲ. ಅದಕ್ಕೆ ಅಡ್ಡಿ ಮಾಡಲಿಲ್ಲ.

ವ್ಯಾಪಾರಿಗಳ ಕೈಯಲ್ಲಿಯು ಎತ್ತು ಮಗುವಿನ ಕೈಯಲ್ಲಿಯ ಆಟಗ ಯಂತಾಗಿ ಪರಿಣಮಿಸಿತು. ಅವರು ದಿನದಲ್ಲಿ ಮೂರು-ನಾಲ್ಕು ಸರತಿ ಮಾಡ ತೊಡಗಿದರು. ಅವರಿಗೆ ಹುಲ್ಲಿನ ಇಲ್ಲವೆ ನೀರಿನ ಚಿಂತೆ ಇದ್ದಂತೆ ತೋರಲಿಲ್ಲ. ಅವರು ಬರಿಯ ಸರತಿಗಾಗಿ ಮಾತ್ರ ಕಾಯುತ್ತಿದ್ದರು.

ಪೇಟೆಗೆ ಒಯ್ದೊಡನೆ ಸರಕು ಇಳಿಸಿ ಮತ್ತೆ ಸರಕು ತುಂಬಿ ಗಾಡಿ ಹೊಡೆ ಯುತ್ತಿದ್ದರು. ಇದರಿಂದಾಗಿ ಎತ್ತಿಗೆ ಸ್ವಲ್ಪವೂ ವಿಶ್ರಾಂತಿ ದೊರೆಯು ತ್ತಿರಲಿಲ್ಲ.

ಅಲಗು ಬಾಬುಗಳ ಮನೆಯಲ್ಲಿ ಸ್ವಲ್ಪವೂ ಕೆಲಸಕ್ಕೆ ಹಚ್ಚುತ್ತಿರಲಿಲ್ಲ. ಐದಾರು ತಿಂಗಳಿಗೊಮ್ಮೆ ಗಾಡಿ ಹೂಡುತ್ತಿದ್ದರು. ನಾಲ್ಕೈದು ಊರುಗಳಿಗೆ ಹೋಗಿ ಬರುತ್ತಿದ್ದರು. ಅಲ್ಲದೆ ಎತ್ತಿಗೆ ನುಚ್ಚು, ನುರುಗು, ಹೊಟ್ಟು, ಹಿಂಡಿ ಸ್ವಚ್ಛವಾದ ನೀರು ದೊರೆಯುತ್ತಿತ್ತು. ಒಮ್ಮೊಮ್ಮೆ ತುಪ್ಪದ ರುಚಿಯೂ ನೋಡಲು ದೊರೆಯುತ್ತಿದ್ದಿತು. ಬರಿಯ ಎತ್ತುಗಳಿಗೋಸುಗ ಒಬ್ಬ ಆಳು ಇರುತ್ತಿದ್ದ; ದಿನವೂ ಮೈ ತೊಳೆಯುತ್ತಿದ್ದ. ಅಲ್ಲಿ ವಿಶ್ರಾಂತಿ ಇದ್ದಷ್ಟು ಇಲ್ಲಿ ಕೆಲಸ. ತಿಂಗಳೊಪ್ಪತ್ತಿನಲ್ಲಿಯೇ ಎತ್ತು ಒಣಗಿ ಬಡಕಲಾಗಿ ಸಾಯುವಂತೆ

ಆಯಿತು. ಗಾಡಿಯ ನೊಗ ನೋಡುತ್ತಲೇ ಅದರ ನೇತ್ರರು ಒಣಗಿ ಹೋಗುತ್ತಿದ್ದಿತು. ಒಂದೊಂದು ಹೆಜ್ಜೆ ಇಡುವುದೂ ಕಷ್ಟಕ್ಕಿಟ್ಟುಕೊಳ್ಳುತ್ತಿದ್ದಿತು. ಆದರೆ ಒಡೆಯರು ಬಿಟ್ಟಾರೇ ? ಚಬಕದ ಏಟಿಗೂ ಅವರು ಹಿಂದುಮುಂದೆ ನೋಡುತ್ತಿರಲಿಲ್ಲ.

ಒಂದು ದಿನ ನಾಲ್ಕನೆಯ ಸರತಿ ಪೇಟೆಯಿಂದ ಹಿಂದಿರುಗಿ ವ್ಯಾಪಾರಿಗಳು ಬರಬೇಕಾದಾಗ ಗಾಡಿಯಲ್ಲಿ ಹೇರಳವಾಗಿ ಸಾಮಾನು ತುಂಬಿಬಿಟ್ಟರು. ಎತ್ತಿಗೆ ಹೆಜ್ಜೆ ಮುಂದಿಡಲಾಗಲಿಲ್ಲ. ಆದರೆ ವ್ಯಾಪಾರಿಗಳು ಬಿಡಬೇಕಲ್ಲ. ಚಾಟಿ ಏಟು ಕೊಡತೊಡಗಿದರು. ಎತ್ತು ಹಾಗೂ ಹೀಗೂ ಎಳೆದುಕೊಂಡು ಹೊರಟಿತು. ಕೆಲ ದೂರ ಓಡಿತು. ಅವಕ್ಕೆ ವಿಶ್ರಾಂತಿ ತೆಗೆದುಕೊಳ್ಳುವುದಕ್ಕೆ ಬಿಡುವೇ ದೊರೆಯುಲಿಲ್ಲ. ಒಡೆಯರಿಗೆ ಬೇಗನೆ ಊರು ಮುಟ್ಟಬೇಕಾಗಿದ್ದಿತು ಅದಕ್ಕಾಗಿ ಎತ್ತನ್ನು ಮನದಣಿ ಹೊಡೆದರು. ಎತ್ತು ಓಡಬಯಸಿತು. ಆದರೆ ಅದರ ಶಕ್ತಿಯೆಲ್ಲ ಉಡುಗಿ ಹೋಗಿ, ನೆಲದ ಮೇಲೆ ಬಿದ್ದು ಅನಂತ ನಿದ್ರೆಯಲ್ಲಿ ತೊಡಗಿತು.

ಈಗ ಮಾತ್ರ ವ್ಯಾಪಾರಿಗಳು ಕೆಳಗಿಳಿದು ಮೈಮೇಲೆ ಕೈಯಾಡಿಸಿದರು. ಬಾಲ ತಿರುಗಿಸಿ ಎಬ್ಬಿಸಲು ಪ್ರಯತ್ನಪಟ್ಟರು. ಸತ್ತ ಎತ್ತು ಎಂದಾದರೂ ಎದ್ದೀತೇ ? ವ್ಯಾಪಾರಿಗಳ ಎದೆಯೊಡೆಯಿತು. ಅವರಿಗೆ ಸತ್ತ ಎತ್ತಿನ ಬಗ್ಗೆ ದುಃಖವಿಲ್ಲ; ‘ ಈ ಸರಕು ಹೇಗೆ ಸಾಗಿಸಬೇಕು ? ’ ಎಂದವರು ಯೋಚಿಸತೊಡಗಿದರು.

ಹಳ್ಳಿಗಳಲ್ಲಿಯ ಓಣಿ ನಗರಗಳ ಓಣಿಗಳಂತಲ್ಲ. ಅದರದು ಚಿಕ್ಕ ಮಕ್ಕಳ ಕಣ್ಣುಗಳಂತೆ ಸ್ಥಿತಿ. ರಾತ್ರಿಯಾಗುತ್ತಲೇ ಓಣಿಯೇ ಕಾಣುವುದಿಲ್ಲ.

ವ್ಯಾಪಾರಿಗಳು ಒದರಿದರು, ಕೂಗಿಕೊಂಡರು, ಆದರೆ ಸಮೀಪದಲ್ಲಿ ಯಾವ ಹಳ್ಳಿಯೂ ಇರಲಿಲ್ಲ. ಕೊನೆಗೆ ಎತ್ತಿನ ಮೇಲೆ ಸಿಟ್ಟಾಗಿ ಬೈಯತೊಡಗಿದರು, “ ದುರ್ದೈವಿ ! ನಿನಗೆ ಸಾಯುವುದೇ ಆಗಿದ್ದರೆ, ಮನೆ ಮುಟ್ಟಿದ ಬಳಿಕ ಏಕೆ ಸಾಯಬಾರದಿತ್ತು ? ಇಲ್ಲಿ ಬೀದಿಯಲ್ಲಿಯೇ ಸತ್ತರೆ, ಸರಕು ಒಯ್ಯುವವರಾರು ? ”

ವ್ಯಾಪಾರಿಗಳು ಆ ದಿನ ಚೆನ್ನಾಗಿ ವ್ಯಾಪಾರ ಮಾಡಿದ್ದರು. ಇನ್ನೂ-ರೈವತ್ತು ರೂಪಾಯಿಗಳ ಗಂಟೊಂದನ್ನು ಅವರು ತಮ್ಮ ದೋತರ ಸೆರಗ ಚುಂಗಿಗೆ ಬಿಗಿದುಕೊಂಡಿದ್ದರು. ಅಲ್ಲದೆ ಗಾಡಿಯ ಮೇಲೆ ಹತ್ತು ಹನ್ನೆರಡು

ಜೀಲ ಉಪ್ಪು ಇದ್ದಿತು. ಆದುದರಿಂದ ಅವರ ಮನಸ್ಸು ಗಾಡಿ ಬಿಟ್ಟು ಹೋಗ ಲೆಳಸಲಿಲ್ಲ. ಅದಕ್ಕಾಗಿ ಗಾಡಿಯ ಮೇಲೆಯೇ ಉರುಳಿಕೊಂಡರು. ಅಲ್ಲದೆ ನಿದ್ರೆಗೆ ಸೊನ್ನೆ ತೋರಿಸುವುದನ್ನು ನಿರ್ಧರಿಸಿದರು. ಬೀಡಿ ಸೇದಿದರು. ಕೂಗಿ ಕೂಗಿ ಹಾಡಿದರು ಸಾಲದೆ ಗುಡುಗುಡಿ ಸೇದಿ ನಡುರಾತ್ರಿಯ ವರೆಗೆ ನಿದ್ದೆ ತಡೆ ಹಿಡಿದರು. ನಡುನಡುವೆ ತೂಕಡಿಕೆಯೂ ಬರುತ್ತಿದ್ದಿತು. ಹೀಗೆ ಒಮ್ಮೆ ಆಕಳಿಸಿ ಸೆರಗಿಗೆ ಕೈಯಿಟ್ಟಾಗ ಗಂಟೇ ಕೈಗೆ ಹತ್ತಲಿಲ್ಲ. ಆದಲ್ಲದೆ ಗಾಡಿ ಯಲ್ಲಿಟ್ಟಿದ್ದ ಒಂದೆರಡು ಎಣ್ಣೆಯ ಡಬ್ಬಿಗಳೂ ಮಾಯ! ಅವರು ಹಣೆಗಟ್ಟಿಸಿ ಕೊಂಡರು.

ನಸುಕಿನಲ್ಲಿ ವ್ಯಾಪಾರಿಗಳು ಮೋರೆ ಸಪ್ಪಗೆ ಮಾಡಿಕೊಂಡು ಮನೆಗೆ ಬಂದರು. ಎಲ್ಲವನ್ನೂ ತಮ್ಮ ಹೆಂಡತಿಗೆ ಸವಿಸ್ತರವಾಗಿ ಹೇಳಿದರು. ಅವಳು ಮೊದಲು ಸ್ವಲ್ಪ ಅತ್ತಳು. ಬಳಿಕ ಅಲಗು ಬಾಬುಗಳಿಗೆ ಬೈಯಲು ಮೊದಲು ಮಾಡಿದಳು, "ಎಂತಹ ಎತ್ತು ಕೊಟ್ಟ, ನಮ್ಮ ಮನೆಯೆಲ್ಲ ತೊಳೆದು ಕೊಂಡು ಹೋಯಿತು."

ಈ ಘಟನೆ ಮುಗಿದು ಒಂದು ತಿಂಗಳಾಗಿ ಹೋಯಿತು. ಅಲಗು ಬಾಬು ಒಮ್ಮೆ ಹಣ ಕೇಳಿದಾಗ ವ್ಯಾಪಾರಿ, ಅವನ ಹೆಂಡತಿ ಇಬ್ಬರೂ ಅವನ ಮೈಮೇಲೆ ಏರಿ ಹೋಗಿ, "ನಿಮ್ಮ ಎತ್ತು ನಮ್ಮ ಮನೆ ಸುಲಿದುಕೊಂಡು ಹೋಯಿತು. ಮತ್ತೆ ಬೆಲೆ ಬೇಡಲು ಬಂದಿದ್ದೀರಿ. ನಾಚಿಕೆಯಾಗುವು ದಿಲ್ಲವೇ? ಎಂತಹದೋ ಎತ್ತನ್ನು ಕೊಟ್ಟು ಅದಕ್ಕೆ ಬೆಲೆ ಬೇಡಲು ಬಂದಿ ದ್ದೀರಾ? ಮೊದಲು ಮೊದಲು ನಾಲ್ಕು ದಿನ ಚೆನ್ನಾಗಿ ಕೆಲಸ ಕೊಟ್ಟಿತು. ಆದರೆ ಮುಂದೆ ಬರಬರುತ್ತ ಕೆಲಸಕ್ಕೆ ಬಾರದ ಕೊರಡಾಯಿತು. ನಾವು ಬನಿಯಾ ಕುಲದವರು. ನಮಗೆ ಮೋಸ ಮಾಡುತ್ತೀರಾ? ಎಲ್ಲಾದರೂ ಉಂಟೇ? ಮೊದಲು ಗುಂಡಿಗೆ ಹೋಗಿ ಮೋರೆ ತೊಳೆದುಬಿಟ್ಟು ಬನ್ನಿ. ನಿಮಗೆ ನಾವೇನು ಬೆಲೆ ಕೊಡುವುದಿಲ್ಲ. ಬೇಕಾದರೆ ನಮ್ಮ ಮುಂದಿ ಎತ್ತನ್ನು ತಿಂಗಳು ಬಿಟ್ಟು, ಎರಡು ತಿಂಗಳು ಬೇಕಾದರೆ ದುಡಿಸಿಕೊಳ್ಳಿ, ಹೆಚ್ಚಿಗೆ ಏನು ಬೇಕು?" ಎಂದು ಮುಂತಾಗಿ ಬೈದುಬಿಟ್ಟರು.

ಚೌಧರಿಗಳ ಅನೇಕ ಹಗೆಗಳೂ ವ್ಯಾಪಾರಿಗಳ ಪರವಾಗಿ ವಾದಿಸತೊಡ ಗಿದರು. ಆದರೆ ಮುನ್ನೂರು ರೂಪಾಯಿ ಬಿಡುವುದೇನು ಸಾಮಾನ್ಯವೇ?

ಚೌಧರಿಗಳ ನೆತ್ತರು ಬಿಸಿಯಾಯಿತು ವ್ಯಾಪಾರಿಗಳು ಬಡಿಗೆ ಹುಡುಕಲು ಹೋದರು. ಈಗ ವ್ಯಾಪಾರಿಯ ಮಡದಿ ಜಗಳಕ್ಕೆ ನಿಂತಳು. ಎರಡು ಬಣಗಳಾದವು. ಕೈಗಳು ಕಾಲುಗಳ ವರೆಗೆ ಹೋದವು. ವ್ಯಾಪಾರಿಯ ಹೆಂಡತಿ ಮನೆಯೊಳಕ್ಕೆ ಹೊಕ್ಕು ಬಾಗಿಲು ಇಕ್ಕಿಕೊಂಡಳು.

ಈ ಗದ್ದಲು ಕೇಳಿ ಊರ ಜನರೆಲ್ಲ ಬಂದು ಈ ಜಗಳ ಬಿಡಿಸಿದರು. "ಈ ರೀತಿ ಜಗಳಾಡುವುದರಿಂದೇನು ಪ್ರಯೋಜನ ? ಪಂಚಾಯಿತಿಗೆ ದೂರು ಹೇಳಿ. ತೀರ್ಮಾನವಾಗುತ್ತದಲ್ಲ." ಎಂದು ಹೇಳಿ ಹೊರಟುಹೋದರು. ಚೌಧರಿಗಳು ಒಪ್ಪಿಕೊಂಡರು.

೭

ಪಂಚಾಯಿತಿಯ ಸಿದ್ಧತೆಗಳಾಗತೊಡಗಿದವು. ಎರಡೂ ಪಕ್ಷದವರು ತಮ್ಮ ಬಲ ಬೆಳೆಯಿಸತೊಡಗಿದರು.

ಮಾರನೆಯ ದಿನ ಸಂಜೆ-ಪಂಚಾಯಿತಿ ಸಭೆ ಅದೇ ಗಿಡದ ಅಡಿಯಲ್ಲಿ ಕೂಡಿತು.

ರಾಮಧನಮಿಶ್ರ ಹೇಳಿದರು, "ಹೂಂ. ಇನ್ನೇಕೆ ತಡ ? ಪಂಚರನ್ನಾರಿಸಿರಿ. ಚೌಧರಿ, ನೀವು ಆರಿಸಿರಿ."

"ಇಲ್ಲ, ವ್ಯಾಪಾರಿಗಳೇ ಆರಿಸಲಿ," ಎಂದು ಅಲಗು ಬಾಬುಗಳು ದೀನ ಭಾವದಿಂದ ಹೇಳಿರು.

"ನನ್ನ ಪರವಾಗಿ ಜುಮನಶೇಖ" ವ್ಯಾಪಾರಿಗಳು ಕೂಗಿ ಹೇಳಿದರು,

ಜುಮನನ ಹೆಸರು ಕೇಳುತ್ತಲೇ ಅಲಗು ಬಾಬುಗಳ ಎದೆ ತುಡಿಯತೊಡಗಿತು. ರಾಮಧನ್ನಮಿಶ್ರರು ಅಲಗು ಬಾಬುಗಳ ಗೆಳೆಯರಾಗಿದ್ದರು, "ಚೌಧರಿ, ನಿನ್ನದೇನು ಅಡ್ಡಿಯಿಲ್ಲವಷ್ಟೇ ?" ಎಂದು ಕೇಳಿದರು. "ನನ್ನದೇನೂ ಅಡ್ಡಿಯಿಲ್ಲ" ನಿರಾಶರಾಗಿ ಚೌಧರಿ ಬಾಬುಗಳು ನುಡಿದರು.

* * * * *

ತನ್ನ ಹೊಣೆಗಾರಿಕೆ ಬಹು ಸಲ ತನ್ನ ಸಂಕುಚಿತ ವ್ಯವಹಾರಗಳನ್ನು ಸುಧಾರಿಸುತ್ತದೆ. ನಾವು ದಾರಿತಪ್ಪಿ, ಅಡ್ಡದಾರಿಗೆ ಬಿದ್ದಾಗ ಇದೇ ಜ್ಞಾನ ನಮ್ಮನ್ನು ಸರಿಯಾದ ಮಾರ್ಗಕ್ಕೆ ಹಚ್ಚುತ್ತದೆ.

ಪತ್ರ ಸಂಪಾದಕನು ತನ ಕೋಣೆಯಲಿ ಕುಳಿತು ಎಷ್ಟು ದೈರ್ಯದಿಂದ

ಹಾಗೂ ಎಷ್ಟು ಸ್ವತಂತ್ರತೆಯಿಂದ ತನ್ನ ಲೆಕ್ಕಣಿಕೆಯನ್ನು ಓಡಿಸಿ ಮಂತ್ರಿ ಮಂಡಲದ ಮೇಲೆ ಕೂಡ ಆಕ್ರಮಣ ಮಾಡುತ್ತಾನೆ. ಆದರೆ ತಾನೇ ಮಂತ್ರಿ ಮಂಡಲ ಸೇರಿದಾಗ! ಇದಕ್ಕೆ ಕಾರಣ ಹೊಣೆಗಾರಿಕೆ.

ಆಗ ತಾನೇ ಹರೆಯದಲ್ಲಿ ಕಾಲಿಟ್ಟ ಯುವಕನೆಷ್ಟು ಉನ್ಮತ್ತನಾಗಿರುತ್ತಾನೆ! ಆತನ ತಂದೆ-ತಾಯಿಗಳು ಈತನಿನ್ನು ಕೈಬಿಟ್ಟನೆಂದೇ ಬಗೆಯುತ್ತಾರೆ. ಅವರು ಆತನನ್ನು ಕುಲಕಲಂಕನೆಂದು ತಿಳಿಯುತ್ತಾರೆ. ಆದರೆ ಹೆಂಡತಿ ಬಂದು ಮನೆತನದ ಹೊಣೆಗಾರಿಕೆ ಮೈಮೇಲೆ ಬಿದ್ದಾಗ! ಸೊಕ್ಕಿನ ಯುವಕ ಮೆತ್ತಗಾಗಿ ಹೋಗುತ್ತಾನೆ. ಇದೆಲ್ಲ ಹೊಣೆಗಾರಿಕೆಯ ಫಲ.

* * * * *

ಜುಮನ ಶೇಖರ ಮನದಲ್ಲೂ ತಾವು ಸರಪಂಚರಾಗಿರುವ ಹೊಣೆಗಾರಿಕೆಯ ಅರಿವು ಆಗತೊಡಗಿತು. 'ನಾನು ಈಗ ನ್ಯಾಯ ಹಾಗೂ ಧರ್ಮಗಳ ಸರ್ವೋಚ್ಚ ಆಸನದ ಮೇಲೆ ಕುಳಿತಿದ್ದೇನೆ. ನನ್ನ ಬಾಯಿಯಿಂದ ಬರುವುದೆಲ್ಲವೂ ದೇವರ ವಾಣಿ' ಎಂದು ಯೋಚಿಸಿದರು. 'ದೇವವಾಣಿಯಲ್ಲಿ ನನ್ನ ಸ್ವಾರ್ಥ ಏನೂ ತುಂಬಕೂಡದು. ಸತ್ಯವನ್ನು ಬಿಟ್ಟರೆ ಗತಿಯಿಲ್ಲ.' ಎಂದು ಅವರು ಬಗೆದರು.

ಪಂಚರು ಎರಡೂ ಪಕ್ಷದವರಿಗೆ ಪ್ರಶ್ನೆ ಕೇಳಿದರು. ಕೆಲಹೊತ್ತಿನ ವರೆಗೆ ಎರಡೂ ಬಣಗಳು ತಮ್ಮ ಪಕ್ಷ ಸಮರ್ಥನೆಗಾಗಿ ಪ್ರಯತ್ನಪಟ್ಟವು. ವ್ಯಾಪಾರಿಗಳು ಎತ್ತಿನ ಬೆಲೆ ಕೊಡಬೇಕೆಂದು ಮೂವರು ನ್ಯಾಯಾಧೀಶರು ನಿರ್ಣಯ ಕೊಟ್ಟರು.

ಕೊನೆಗೆ ಜುಮನರು "ಅಲಗು ಚೌಧರಿಗಳೇ, ವ್ಯಾಪಾರಿಗಳೇ, ಪಂಚರು ನಿಮ್ಮ ಪ್ರಶ್ನೆಯ ಬಗ್ಗೆ ಚೆನ್ನಾಗಿ ವಿಚಾರ-ವಿನಿಮಯ ಮಾಡಿದರು. ವ್ಯಾಪಾರಿಗಳು ಚೌಧರಿ ಬಾಬುಗಳಿಗೆ ಎತ್ತಿನ ಮೂಲ ಬೆಲೆ ಕೊಡಬೇಕು. ಎತ್ತು ಕೊಂಡಾಗ ಬೇನೆಯಿಂದಿರಲಿಲ್ಲ. ಆಗಲೇ ಬೆಲೆ ಕೊಟ್ಟಿದ್ದರೆ ಈಗ ಯಾರೂ ಬೇಡಲು ಹೋಗುತ್ತಿರಲಿಲ್ಲ. ವ್ಯಾಪಾರಿಗಳು ಬಹಳ ಕಠಿಣ ರೀತಿಯಿಂದ ಎತ್ತನ್ನು ದುಡಿಸಿಕೊಂಡುದರಿಂದ ಎತ್ತು ಸತ್ತಿತು. ಅಲ್ಲದೆ ಅವರು ಚೆನ್ನಾದ ಆಹಾರವನ್ನೂ ಹಾಕುತ್ತಿರಲಿಲ್ಲ........"

ರಾಮಧನಮಿಶ್ರ ನಡುವೆ ಬಾಯಿ ಹಾಕಿ ಹೇಳಿದರು, "ವ್ಯಾಪಾರಿಗಳು

ಎತ್ತನ್ನು ಕಠಿಣ ರೀತಿಯಿಂದ ನಡೆಯಿಸಿಕೊಂಡುದಕ್ಕಾಗಿ ಅವರಿಂದ ದಂಡ ತೆಗೆದುಕೊಳ್ಳಬೇಕು."

"ಇದು ಎರಡನೆಯ ಪ್ರಶ್ನೆ, ಇದಕ್ಕೆ ಸಂಬಂಧವಿಲ್ಲ," ಎಂದು ಜುಮನ ಹೇಳಿದರು.

"ನನಗೆ ಸ್ವಲ್ಪ ಕರುಣೆ ತೋರಿಸಬೇಕು. ಕೆಲವೊಂದು ಹಣವನ್ನಾದರೂ ಬಿಟ್ಟುಕೊಡಬೇಕು." ಎಂದು ವ್ಯಾಪಾರಿಗಳು ಹೇಳಿದರು.

"ಅದು ಅಲಗುವಿನ ಮನಸ್ಸು. ನಾನೇನು ಅದನ್ನು ಹೇಳಲಿ?" ಜುಮನ ಹೇಳಿದರು.

ಅಲಗು ಚೌಧರಿಗಳಿಗೆ ಅತ್ಯಂತ ಆನಂದವಾಯಿತು. ಯಾವುದೋ ಹುರುಪು ಬಂದು ಕೂಗಿದರು, "ಪಂಚಪರಮೇಶ್ವರರಿಗೆ ಜಯವಾಗಲಿ" ಸಭೆಯೆಲ್ಲ ಕೂಗಿತು, "ಪಂಚಪರಮೇಶ್ವರರಿಗೆ ಜಯವಾಗಲಿ."

ಪ್ರತಿಯೊಬ್ಬನೂ ಜುಮನರ ನೀತಿಯನ್ನೂ ಹೊಗಳುತ್ತಿದ್ದ. ಇದಕ್ಕೇ ನಿಜವಾದ ನ್ಯಾಯವೆನ್ನಬೇಕು ಎಂದು ಹೇಳುತ್ತಿದ್ದ. "ಇದು ಮನುಷ್ಯರ ಕೆಲಸವಲ್ಲ, ಪಂಚರಲ್ಲಿ ಪರಮೇಶ್ವರನಿರುತ್ತಾನೆ. ಇದೆಲ್ಲ ಅವನದೇ ಮಹಿಮೆ. ಪಂಚರೆದುರಿನಲ್ಲಿ ಹಾಲಿನದು ಹಾಲಿಗೆ, ನೀರಿನದು ನೀರಿಗೆ" ಎಂದು ಎಲ್ಲರೂ ಹೇಳುತ್ತಿದ್ದರು.

ಬಳಿಕ ಜುಮನ ಶೇಖರು ಅಲಗು ಬಾಬುಗಳ ಬಳಿ ಬಂದರು. ಅವರನ್ನು ಅಪ್ಪಿಕೊಂಡು, ಬಿಡಿಸಿಕೊಂಡು ಹೇಳಿದರು: "ಅಣ್ಣಾ, ಪಂಚಾಯತಿಯಲ್ಲಿ ನನ್ನ ವಿರುದ್ಧ ತೀರ್ಪು ಹೇಳಿದಾಗ ನಾನು ನಿನ್ನನ್ನು ವೈರಿಯೆಂದೇ ಬಗೆದಿದ್ದೆ. ಆದರೆ ಇಂದು, ನ್ಯಾಯಾಸನದ ಮೇಲೆ ಕುಳಿತ ಪ್ರತಿಯೊಬ್ಬನು ಯಾರ ಗೆಳೆಯನೂ ಆಗಿರುವುದಿಲ್ಲ. ಎಂಬುದರ ಅರಿವಾಯಿತು. ನ್ಯಾಯವನ್ನುಳಿದು ಇನ್ನಾವುದೂ ಆತನ ಚಿತ್ತಭಿತ್ತಿಯ ಮೇಲೆ ಮೂಡಲಾರದು. ನನಗೆ ಇಂದು ಪಂಚರ ಮನಸ್ಸಿನಲ್ಲಿ ದೇವರು ಹೊಕ್ಕು ನುಡಿಸುತ್ತಾನೆಂಬುದರಲ್ಲಿ ಸಂಪೂರ್ಣ ವಿಶ್ವಾಸ ಹುಟ್ಟಿತು."

ಅಲಗು ಚೌಧರಿಗಳು ಚಿಕ್ಕಮಕ್ಕಳಂತೆ ಅತ್ತುಬಿಟ್ಟರು. ಕಾಣದೇ ಒಣಗಿ ಹೋದ ಅವರ ಗೆಳೆತನದ ಲತೆ, ನೀರುಂಡು ಮತ್ತೆ ಕೊನರಿತು.

---

# ಸತ್ಯಾಗ್ರಹ

## ೧

ವ್ಹಾಯಿಸರಾಯರು ಬನಾರಸಕ್ಕೆ ಬರುವವರಿದ್ದರು. ಅದಕ್ಕಾಗಿ ಚಿಕ್ಕ ಪುಟ್ಟ ನೌಕರರಿಂದ ಮೇಲಧಿಕಾರಿಗಳ ವರೆಗೆ ಎಲ್ಲರೂ ಅವರನ್ನು ಸ್ವಾಗತಿಸುವ ಸಿದ್ಧತೆಯಲ್ಲಿದ್ದರು. ಇತ್ತ ಕಾಂಗ್ರೆಸ್ಸಿನವರು ಪೇಟೆಯಲ್ಲಿ ಹರತಾಳಮಾಡುವ ಸೂಚನೆಯನ್ನಿತ್ತಿದ್ದರು. ಮೇಲಧಿಕಾರಿಗಳು ಹರತಾಳ ಆಗದಂತೆ ನೋಡ ಲೆತ್ನಿಸುತ್ತಿದ್ದರು.

ಬೀದಿಗಳಲ್ಲಿ ಅಲ್ಲಲ್ಲಿ ಬಾವುಟ ನೆಡುವ, ಬೀದಿ ಉಡುಗುವ, ಅವಶ್ಯವಿದ್ದಲ್ಲಿ ಸ್ವಾಗತಕ್ಕಾಗಿ ದೊಡ್ಡ ದೊಡ್ಡ ಬಾಗಿಲುಗಳನ್ನು ರಚಿಸುವ ಉದ್ಯೋಗ ಎಡೆಬಿಡದೆ ನಡೆದಿದ್ದಿತು. ಅಲ್ಲದೆ ಒಂದು ದೊಡ್ಡ ಭಾಷಣಮಂದಿರ (Pendal)ದ ರಚನೆಯು ಆಗತೊಡಗಿದ್ದಿತು. ಇನ್ನೊತ್ತಟ್ಟಿಗೆ ಸೈನಿಕರು, ಪೋಲಿಸರು ಬೀದಿಗಳಲ್ಲಿ ಕವಾಯತು ಮಾಡುತ್ತ ತಿರುಗುತ್ತಿದ್ದರು. ಹರತಾಳವಾಗಗೊಡಬಾರದೆಂದು ಸರಕಾರಿ ನೌಕರರು ಯತ್ನಿಸುತ್ತಿದ್ದರೆ, ಅಖಂಡವಾದ ಹರತಾಳವಾಗಬೇಕೆಂದು ಕಾಂಗ್ರೆಸ್ಸಿಗರು ಯತ್ನಿಸುತ್ತಲಿದ್ದರು. "ನೌಕರರಿಗೆ ಪಾಶವೀಬಲ ಹೆಚ್ಚಾಗಿದ್ದರೆ ನಮಗೆ ನೈತಿಕಬಲವಿದೆ. ಈ ಸಲ ಪರೀಕ್ಷೆ ಆಗಿಯೇ ತೀರುವುದು. ನೋಡೋಣ ಯಾರು ಗೆಲ್ಲುತ್ತಾರೆ" ಎಂದು ಅವರೆನ್ನುತ್ತಿದ್ದರು.

ಕುದುರೆಯನ್ನು ಹತ್ತಿಕೊಂಡು ಮ್ಯಾಜಿಸ್ಟ್ರೇಟರು, "ಒಬ್ಬೊಬ್ಬರನ್ನೇ ಸೆರೆಮನೆಗೆ ಅಟ್ಟುತ್ತೇನೆ, ಪೇಟೆ ಲೂಟ ಮಾಡಿಸಿಬಿಡುತ್ತೇನೆ," ಎಂದು ಮುಂತಾಗಿ ವ್ಯಾಪಾರಸ್ಥರನ್ನು ಬೆದರಿಸುತ್ತ ನಡೆದಿದ್ದರು. "ತಾವು ಮ್ಯಾಜಿಸ್ಟ್ರೇಟರೇ ಆಗಿದ್ದೀರಿ. ಬೇಕಾದುದನ್ನು ಮಾಡಲು ಶಕ್ತರು. ಆದರೆ ನಾವೇನು ಮಾಡೋಣ? ಕಾಂಗ್ರೆಸ್ಸಿಗರು ನಮ್ಮನ್ನು ಬಿಡುವಂತಿಲ್ಲ. ನಮ್ಮ ಅಂಗಡಿಯ ಮುಂದೆಯೇ ಕುಳಿತು ಸತ್ಯಾಗ್ರಹಮಾಡಲೂ ಹಿಂದುಮುಂದೆ ನೋಡರು. ಹಾಗಾದ ಪಕ್ಷದಲ್ಲಿ ನಾವು ನೇರೆ ಮೇಲೆತ್ತಲಾದೀತೆ? ದೊಡ್ಡ ಮನುಷ್ಯ

ರೊಬ್ಬರು ಬರುವವರಿದ್ದಾರೆ ನಮಗೆ ಗೊತ್ತು. ಆದರೆ ಈಗ ನಾವೇನು ಮಾಡೋಣ?" ಎಂದು ವ್ಯಾಪಾರಿಗಳು ಕೈಜೋಡಿಸಿ ಉತ್ತರವೀಯುತ್ತಿದ್ದರು.

ರಾಯ ಹರನಂದನ ಸಾಹೇಬರು, ರಾಜಾ ಲಾಲಚಂದ ಹಾಗೂ ಖಾನ ಬಹದ್ದೂರ ಮೌಲವಿ ಸಾಹೇಬರು ನೌಕರರಿಗಿಂತ ಹೆಚ್ಚುವ್ಯಾಕುಲರಾಗಿದ್ದರು. ಮಾಜಿಸ್ಟ್ರೇಟರೊಡಗೂಡಿ ಅವರೂ ಬಹು ಯತ್ನಪಟ್ಟರು; ಅಂಗಡಿಕಾರರನ್ನು ಮನೆಗೆ ಕರೆಯಿಸಿ ಮೆತ್ತನೆಯ ಮಾತುಗಳನ್ನಾಡಿ ಹರತಾಳ ತಪ್ಪಿಸಲು ಯತ್ನ ಮಾಡಿದರು. ಆದರೆ ಕೆಲವೇ ಕಾಂಗ್ರೆಸ್ಸಿಗರ ಕೈವಾಡದ ಮೂಲಕ ಅವರ ಪ್ರಯತ್ನ ನಿಷ್ಫಲವಾಯಿತು. ಅಲ್ಲದೆ ಪಕ್ಕದ ತರಕಾರಿಯ ಮುದುಕಮ್ಮನೂ ಹೇಳಿದಳು, "ನನ್ನನ್ನು ಕೊಂದರೂ ಚಿಂತೆಯಿಲ್ಲ, ಹರತಾಳ ಮಾಡಿಯೇ ತೀರುವೆ."

"ಬೇರೆ ಊರಿನಿಂದ ವ್ಯಾಪಾರಿಗಳನ್ನು ಕರೆಯಿಸಿ ಬೇರೆ ಪೇಟೆಯನ್ನೇ ಏಕೆ ತೆಗೆಯಬಾರದು?" ಎಂದು ರಾಯಸಾಹೇಬರು ಸೂಚಿಸಿದರು, "ಆದರೆ ಅದೆಲ್ಲ ಮಾಡುವಷ್ಟು ಸಮಯವೆಲ್ಲಿದೆ? ಆದಕ್ಕಿಂತ ಕಾಂಗ್ರೆಸ್ಸಿಗರನ್ನು ಸೆರೆ-ಮನೆಗೆ ಕಳುಹಿಸಿ ಅವರ ಆಸ್ತಿಯನ್ನೆಲ್ಲ ಕಸಿದುಕೊಳ್ಳಬೇಕು." ಎಂದು ಖಾನ ಸಾಹೇಬರು ಸೂಚನೆ ಮಂಡಿಸಿದರು. ರಾಜಾಸಾಹೇಬರು ಹೇಳಿದರು, "ಸೆರೆ ಹಿಡಿಯುವುದರಿಂದ ಏನನ್ನೂ ಸಾಧಿಸಲಾಗದು. ಅದಕ್ಕೆ ನಮ್ಮ ಬದಿಗೆ ಬರುವ ಕಾಂಗ್ರೆಸ್ಸಿಗರಿಗೆಲ್ಲ ಸರಕಾರಿ ನೌಕರಿ ಕೊಡುವೆವೆಂದು ಪ್ರಕಟನೆ ತೆಗೆಯ ಬೇಕು. ಅವರಲ್ಲಿ ಹೆಚ್ಚು ಜನ ಲೋಭಿಗಳೇ ಆಗಿರುವುದರಿಂದ ನಮ್ಮ ಕಾರ್ಯಕ್ಕೆ ಯಶ ಸಿಕ್ಕಬಹುದು."

ಆದರೆ ಮಾಜಿಸ್ಟ್ರೇಟರಿಗೆ ಒಂದೂ ಯುಕ್ತಿ ಹರಿದೋರಲಿಲ್ಲ. ಅಂದಿಗೆ ವ್ಹಾಯಿಸರಾಯರು ಬರುವುದಕ್ಕೆ ಮೂರೇ ದಿನಗಳು ಉಳಿದಿದ್ದವು.

## ೨

ಕೊನೆಗೆ ರಾಜಾಸಾಹೇಬರಿಗೊಂದು ಯುಕ್ತಿ ಹೊಳೆಯಿತು- ನಾವು ನೈತಿಕಬಲದ ಉಪಯೋಗವನ್ನೇಕೆ ಮಾಡಬಾರದು? ಧರ್ಮದ ಅಂಜಿಕೆಯಿಂದ ಲಾದರೂ ವ್ಯಾಪಾರಿಗಳು ಹರತಾಳದಿಂದ ನಿವೃತ್ತಿಮಾರ್ಗ ಕೈಕೊಂಡರೆ?

ಆದಕ್ಕಾಗಿ, ಅಂಗಡಿ ತೆರೆಯದಿದ್ದರೆ ಅನಶನ ವ್ರತ ಮಾಡುವೆನು ಎಂದು ಹೇಳಿಸಿ, ಆದರಂತೆ ಮಾಡಲು ಒಬ್ಬನನ್ನು ಸಿದ್ಧಗೊಳಿಸಬೇಕು. ಅವನು ಒಬ್ಬ ಪ್ರಸಿದ್ಧ ಬ್ರಾಹ್ಮಣನಾಗಿದ್ದರೆ ಲೇಸು." ಎಂದು ಅವರು ತಮ್ಮ ಯೋಜನೆಯನ್ನು ಇತರರ ಮುಂದಿಟ್ಟರು. ಇದಕ್ಕೆ ಎಲ್ಲರೂ ತಮ್ಮ ಸಮ್ಮತಿಯನ್ನಿತ್ತರು.

ಆಯಿತು, ಆದರೆ ಇದಕ್ಕೊಪ್ಪುವ ಪ್ರಸಿದ್ಧ ಪಂಡಿತನಾರು? "ಗದಾಧರ ಶರ್ಮರು ಆಗಬಹುದೇ?" ರಾಯಸಾಹೇಬರು ಕೇಳಿದರು.

"ಸರ್ವಥಾ ಇಲ್ಲ, ಅವನನ್ನಾರು ಕೇಳುತ್ತಾರೆ? ಬರಿಯ ವರ್ತಮಾನ ಪತ್ರದಲ್ಲಿ ಭವಿಷ್ಯ ಬರೆದರೆ ಏನಾಯಿತು? ಪ್ರಸಿದ್ಧ ಪಂಡಿತ ಬೇಕಲ್ಲವೆ?" ರಾಜಾಸಾಹೇಬರು ಮಾರುತ್ತರವಿತ್ತರು.

"ದಮಡಿಯ ಓಝುನಿಂದಾಗಬಹುದೇ?"

"ಕಾಲೇಜ ಹುಡುಗರನ್ನುಳಿದು ಇನ್ನಾರು ತಾನೇ ಅವನನ್ನು ಕೇಳುತ್ತಾರೆ?"

"ಪಂಡಿತ ಹಿರಿಯ ರಾಮಾಶಾಸ್ತ್ರಿಗಳು?"

"ಓಹೋ, ಆಗಬಹುದು! ತಾವು ಸರಿಯಾದ ವಿಚಾರ ಮಾಡಿದಿರಿ. ಅವರು ಒಪ್ಪಬಹುದಾದರೆ ನಮ್ಮ ಕಾರ್ಯ ಸಾಧ್ಯವಾಗಬಹುದು. ಅವರನ್ನೇ ಕರೆಯಿಸಬೇಕು. ವಿದ್ವನ್ಮಣಿಗಳು, ಸುಪ್ರಸಿದ್ಧ ಪಂಡಿತರು. ಅವರ ಮನವೊಲಿಸಿದರೆ ನಮಗೆ ಯಶ ಖಂಡಿತ." ಎಂದರು ರಾಜಾಸಾಹೇಬರು.

ರಾಯಸಾಹೇಬರು ಕೂಡಲೇ ರಾಮಾಶಾಸ್ತ್ರಿಗಳನ್ನು ಕರೆಕಳುಹಿದರು. ಆಗ ಶಾಸ್ತ್ರಿಗಳಿನ್ನೂ ಪೂಜೆಯಲ್ಲಿ ತೊಡಗಿದ್ದರು. ಇದನ್ನು ಕೇಳುತ್ತಲೇ ಪೂಜೆಯನ್ನು ಬೇಗನೆ ಮುಗಿಸಿದರು. "ಇಂದು ನಮ್ಮ ದೈವತೆರೆದಂತೆ ತೋರುತ್ತದೆ. ಬಟ್ಟೆ ತಾ. ಏಕೆ ಕರೆದರೋ ನೋಡಿಕೊಂಡು ಬರುತ್ತೇನೆ." ಎಂದು ತಮ್ಮ ಪತ್ನಿಗೆ ತಿಳಿಸಿದರು.

"ಅಡಿಗೆ ಸಿದ್ಧವಾಗಿದೆ. ಊಟ ಮಾಡಿಕೊಂಡೇ ಹೊರಡಿ. ಬರಲು ವೇಳೆ ಸಿಕ್ಕೀತೋ ಇಲ್ಲವೋ ಯಾರಿಗೆ ಗೊತ್ತು!" ಎಂದು ಅವರ ಪತ್ನಿ ಹೇಳಿದಳು. ಆದರೆ ಶಾಸ್ತ್ರಿಗಳು ತಮಗೋಸುಗ ಯಾರನ್ನೂ ತಡೆಯಿಸದಂತಹ ಸ್ವಭಾವದವರಾಗಿದ್ದರು. ಆಗ ಚಳಿಗಾಲವಿದ್ದಿತು. ಸಕಲಾತಿಯ ನಿಲುವಂಗಿ

ಧರಿಸಿ, ಜರದಂಚಿನ ರೇಶಿಮೆಯ ದೋತರ ಉಟ್ಟು, ರೇಶಿಮೆ ದೋತರ ಒಂದನ್ನು ಹೊದ್ದು, ಹೊರಟರು. ಅವರ ಮೋರೆಯಿಂದ ಬ್ರಹ್ಮತೇಜ ಉಕ್ಕುತ್ತಿದ್ದಿತು. ಅವರು ಯಾರಾದರೂ ಪ್ರಸಿದ್ಧ ಶಾಸ್ತ್ರಿಗಳಿರಬಹುದೆಂದು ದೂರಿನಿಂದಲೇ ಯಾರಾದರೂ ನೋಡಿ ತರ್ಕಿಸಬಹುದಾಗಿದ್ದಿತು. ಬೀದಿಯಲ್ಲಿ ಕಂಡವರೆಲ್ಲ ಕೈಜೋಡಿಸುತ್ತಲೇ ಇದ್ದರು. ಎಷ್ಟೋ ಅಂಗಡಿಕಾರರೂ ತಲೆವಾಗಿದರು. ಹೀಗೆಯೆ ಸಾಗುತ್ತ ಶಾಸ್ತ್ರಿಗಳು ರಾಜಾಸಾಹೇಬರ ಮನೆ ಮುಟ್ಟಿದರು. ಮೂವರು ಮಿತ್ರರೂ ಸ್ವಾಗತಿಸಿದರು.

"ಏನು ರಾಮಾಶಾಸ್ತ್ರಿಗಳೇ, ಎಲ್ಲವೂ ಒಳಿತಷ್ಟೇ? ತಾವಂತೂ ಪ್ರದರ್ಶನದಲ್ಲಿಡಲು ಯೋಗ್ಯರು. ತಮ್ಮ ತೂಕ ಹತ್ತುಮಣಕ್ಕಿಂತ ಕಡಿಮೆಯಿಲ್ಲವಷ್ಟೇ?" ಎಂದು ಖಾನಸಾಹೇಬರು ನಗುನಗುತ್ತ ನುಡಿದರು.

"ಒಂದು ಮಣ ಶಾಸ್ತ್ರಾಭ್ಯಾಸಕ್ಕೆ ಹತ್ತುಮಣ ಬುದ್ಧಿ ಬೇಕು. ಅಲ್ಲದೆ ಒಂದು ಮಣ ಬುದ್ಧಿಗೆ ಹತ್ತುಮಣದ ಶರೀರಬೇಕು. ಇಲ್ಲದೆ ಹೋದರೆ ಭಾರ ತಡೆಯುವ ಬಗೆ ಹೇಗೆ?" ಎಂದು ರಾಯಸಾಹೇಬರು ಹೇಳಿದರು.

"ತಮಗೆ ಇದರ ಅರ್ಥ ತಿಳಿಯುವುದಿಲ್ಲ. ಬುದ್ಧಿ ಒಂದು ತರಹದ ನೆಗಡಿಯಿದ್ದಂತೆ. ಮೆದುಳಿನಲ್ಲಿ ಪ್ರವೇಶಿಸಲಾಗದಿದ್ದರೆ, ಮೈಯಲ್ಲಾದರೂ ಪ್ರವೇಶಿಸಿಯೇ ತೀರುತ್ತದೆ " ಎಂದು ರಾಜಾಸಾಹೇಬರು ಹೇಳಿದರು.

"ಬೊಜ್ಜು ಬೆಳೆದ ದಪ್ಪನಾಗಿದ್ದ ಮನುಷ್ಯರಿಗೆ ವಿದ್ಯೆಯಿರುವುದಿಲ್ಲವೆಂದು ನಾನು ನಮ್ಮಹಿರಿಯರಿಂದ ಕೇಳಿದ್ದೇನೆ."ಎಂದು ಖಾನಸಾಹೇಬರು ಹೇಳಿದರು.

" ನಿಮ್ಮ ಲೆಕ್ಕ ತಪ್ಪಿದೆ. ಮನುಷ್ಯನ ತೂಕದ ಹತ್ತನೆಯ ಪಾಲು ಬುದ್ಧಿಯಿರುವುದೆಂದು ನೀವು ನಂಬುವಿರೆಂದ ಬಳಿಕ, ದಪ್ಪನಾಗಿದ್ದವರೆಲ್ಲ ಹೆಚ್ಚು ಬುದ್ಧಿವಂತರಲ್ಲವೇ?" ರಾಯಸಾಹೇಬರು ಹೇಳಿದರು.

" ಅಂದರೆ 'ಮನುಷ್ಯ ಹೆಚ್ಚು ದಪ್ಪಾಗಿದ್ದಷ್ಟು ಅವನಲ್ಲಿ ಹೆಚ್ಚು ಬುದ್ಧಿ' ಎಂದು ಸಿದ್ಧವಾಯಿತಲ್ಲ?" ಎಂದು ರಾಜಾಸಾಹೇಬರು ಕೇಳಿದರು.

" ಮಹತ್ತಮರಾದ ಬುದ್ಧಿವಂತರೆದುರಿಗೆ ನನ್ನ ಬುದ್ಧಿಯೇನು ಬಂತು?" ಎಂದು ರಾಮಾಶಾಸ್ತ್ರಿಗಳು ವ್ಯಂಗ್ಯಬಾಣವನ್ನೆಸೆದರು.

ಈ ರೀತಿಯಾಗಿ ನಗುವಿನ ಹೊಳೆ ಹರಿದುಹೋದ ಬಳಿಕ ರಾಜಾ-ಸಾಹೇಬರು ಆಗಿನ ಪರಿಸ್ಥಿತಿಯನ್ನೂ ತಾವು ಕೈಕೊಳ್ಳಲಿರುವ ಉಪಾಯವನ್ನೂ ಶಾಸ್ತ್ರಿಗಳಿಗೆ ಬಣ್ಣಿಸಿದರು. ಅಲ್ಲದೆ, "ನಿಮ್ಮ ಭವಿಷ್ಯತ್ತು ನಿಮ್ಮ ಕೈಯಲ್ಲಿದೆ. ಯಾವ ಮನುಷ್ಯನಿಗೂ ಇಂತಹ ಸುವರ್ಣಸಂಧಿ ದೊರೆತಿರಲಿಕ್ಕಿಲ್ಲ. ಹರತಾಳವಾಗದಿದ್ದರೆ, ನಾನು ಹೆಚ್ಚಿಗೇನೂ ಹೇಳಬಯಸುವುದಿಲ್ಲ, ತಮಗೆ ಆಜನ್ಮ ಇನ್ನೊಬ್ಬರಿಗೆ ಕೈಯೊಡ್ಡುವ ಸಮಯ ಬರಲಾರದು. ನಾಗರಿಕರೆಲ್ಲ ನಡುಗುವಂತಹ ಒಂದು ವ್ರತ ಸ್ವೀಕರಿಸಿಬಿಡಿರಿ, ಜನತೆ ಧಾರ್ಮಿಕ ಭಾವನೆಗೆ ಒಳಗಾಗಿ ಹರತಾಳ ಮಾಡಬಾರದು. ಇಷ್ಟಾದರೆ ಸಾಕು." ಎಂದು ಹೇಳಿದರು.

ಅದಕ್ಕೆ ಹಿರಿಯ ರಾಮಾಶಾಸ್ತ್ರಿಗಳು ಗಂಭೀರ ಭಾವದಿಂದ ಉತ್ತರವಿತ್ತರು, "ಆಕಾಶದಿಂದ ಒಮ್ಮೆಲೆ ಮಳೆಯಾಗುವಂತಹ, ಮಾರಿಯ ಪ್ರಕೋಪ ಶಾಂತವಾಗುವಂತಹ, ಆಹಾರಧಾನ್ಯಗಳ ಧಾರಣೆ ಏರು-ಇಳಿಯುವಂತಹ ಅನುಷ್ಠಾನಗಳನ್ನು ಕೈಕೊಳ್ಳಬಲ್ಲೆ. ಕಾಂಗ್ರೆಸ್ಸಿಗರ ಮಣ್ಣುಮುಕ್ಕಿಸುವುದೇನು ಕಠಿಣವಾದ ಕೆಲಸವೇ? ಇಂಗ್ಲಿಷು ಓದಿದ ಮಹಾನುಭಾವರು ಹೇಳುತ್ತಾರೆ, 'ತಾವು ಮಾಡುವಂತಹ ಕಾರ್ಯಗಳನ್ನು ಯಾರೂ ಮಾಡಲಾರರೆಂ'ದು. ಆದರೆ ನಮ್ಮಲ್ಲಿರುವ ಗುಪ್ತವಿದ್ಯೆಗಳ ಅರಿವು ಅವರಿಗೇನು?"

"ಓಹೋ, ಹಾಗಾದರೆ ತಾವು ಭೂಮಿಗೆ ಇಳಿದ ಪರಮೇಶ್ವರರೇ ಎಂದಂತಾಯಿತು. ನಮಗೆ ಇದುವರೆಗೆ ಗೊತ್ತಿರಲಿಲ್ಲ. ಇಲ್ಲವಾದರೆ ಎಂದಿಗೋ ಕೆಲಸ ಮುಗಿದು ಹೋಗುತ್ತಿದ್ದಿತು." ಎಂದು ಖಾನಸಾಹೇಬರು ಹೇಳಿದರು.

"ನಾನು ಗುಪ್ತಧನದ ಇರವನ್ನು ಗೊತ್ತುಹಚ್ಚಬಲ್ಲೆ. ಮಡಿದವರನ್ನು ಭೂಲೋಕಕ್ಕೆ ಕರೆದುತರಬಲ್ಲೆ." ಎಂದು ಹಿರಿಯ ರಾಮಾಶಾಸ್ತ್ರಿಗಳು ಉಬ್ಬುಬ್ಬಿ ಹೇಳತೊಡಗಿದರು.

"ಹೋಗಲಿ. ಇದಕ್ಕಾಗಿ ತಮಗೆ ಯಾವ ಪ್ರತಿಫಲ ಕೊಡಬೇಕಾದೀತು?" ರಾಜಾಸಾಹೇಬರು ಕೇಳಿದರು.

"ತಾವು ಶ್ರದ್ಧೆಯಿಂದ ಕೊಟ್ಟಷ್ಟು ತೆಗೆದುಕೊಳ್ಳುವೆ" ಶಾಸ್ತ್ರಿಗಳು ಉತ್ತರವಿತ್ತರು.

"ಯಾವ ಅನುಷ್ಠಾನ ಮಾಡಲಿರುವಿರೆಂದು ಕೇಳಬಹುದೇ?" ರಾಜಾಸಾಹೇಬರು ಕೇಳಿದರು.

"ಅನಶನ ವ್ರತದೊಡನೆ ಮಂತ್ರಗಳನ್ನೂ ಜಪಿಸಬೇಕಾಗುವುದು. ಒಟ್ಟಿಗೆ ತಮ್ಮ ಕಾರ್ಯ ಯಶಸ್ವಿ ರೀತಿಯಿಂದ ಮಾಡಿಕೊಡದಿದ್ದರೆ ನಾನು ರಾಮಾ-ಶಾಸ್ತ್ರಿಯೇ ಅಲ್ಲ." ಶಾಸ್ತ್ರಿಗಳು ಮಾರ್ನುಡಿದರು.

"ಹಾಗಾದರೆ ಎಂದಿನಿಂದ?" ರಾಜಾಸಾಹೇಬರು ಕೇಳಿದರು.

"ಇಂದಿನಿಂದಲೇ. ಮೊದಲು ದೇವತೆಗಳ ಪೂಜೆಯಾಗಬೇಕು. ಅದಕ್ಕೆ ಕೆಲವು ರೂಪಾಯಿಗಳು ಬೇಕು." ಶಾಸ್ತ್ರಿಗಳು ಉತ್ತರವಿತ್ತರು.

ರಾಜಾಸಾಹೇಬರಿಗೆ ರೂಪಾಯಿಗಳ ಕೊರತೆ ಇರಲಿಲ್ಲ. ಶಾಸ್ತ್ರಿಗಳು ರೂಪಾಯಿಗಳನ್ನು ಪಡೆದುಕೊಂಡು ಸಂತೋಷದಿಂದ ಮನೆಗೆ ತೆರಳಿದರು. ಅಲ್ಲಿ ತಮ್ಮ ಹೆಂಡತಿಯೊಡನೆ, ಆದ ಎಲ್ಲ ವಿಷಯವನ್ನೂ ಹೇಳಿದರು. ಆಗ ಅವರ ಪತ್ನಿ, "ನೀವು ವಿನಾಕಾರಣ ಈ ರೀತಿ ಕುತ್ತುಗಳನ್ನು ಮೈಮೇಲೆ ತೆಗೆದುಕೊಳ್ಳುತ್ತೀರಿ. ಹಸಿವು ತಡೆಯಲಾಗದಿದ್ದರೆ? ಸುಮ್ಮನೆ ಜನರಲ್ಲಿ ಅಪಹಾಸ್ಯಕ್ಕೆ ಗುರಿಯಾಗುವಿರಿ. ರೂಪಾಯಿ ತಿರುಗಿ ಕೊಟ್ಟುಬಿಡಿರಿ." ಎಂದು ಬುದ್ಧಿವಾದ ಹೇಳಿದಳು. ಶಾಸ್ತ್ರಿಗಳು ಹೇಳಿದರು, "ಹಸಿವು ಹೇಗೆ ತಡೆಯಲಾಗುವುದಿಲ್ಲ? ನಾನು ಈಗಲೇ ಹೋಗಿ ಕೂಡ್ರುವಷ್ಟು ಮೂರ್ಖನೆಂದು ತಿಳಿದಿದ್ದೀ ಏನು? ಈಗ ನನ್ನ ಊಟದ ವ್ಯವಸ್ಥೆ ಮಾಡು. ಜಿಲೇಬಿ, ಉಂಡಿ, ಮಿಠಾಯಿ ತಂದು ಬಡಿಸು. ಹೊಟ್ಟೆ ತುಂಬ ಉಂಡು ಮೇಲೆ ಅರ್ಧಸೇರು ಕೆನೆ ತಿನ್ನುತ್ತೇನೆ. ಅಲ್ಲದೆ ಎರಡು ಸೇರು ಬದಾಮು ತಿನ್ನುವೆ. ಮೇಲೆ ತೃಪ್ತಿಯಾಗುವಷ್ಟು ಕೆನೆ-ಮೊಸರು ಹೊಡೆಯುವೆ. ಬಳಿಕ ಹಸಿವು ಎಂದರೆ ಹೇಗೆ ಇರುತ್ತದೆಯೋ ನೋಡುವೆ. ಮೂರು ನಾಲ್ಕು ದಿನಗಳ ವರೆಗೆ ಹಸಿವೆ ನೆನಪಾಗಲಿಕ್ಕಿಲ್ಲ. ಈಗ ನಮ್ಮ ಭಾಗ್ಯಸೂರ್ಯ ಉದಯಿಸಿದ್ದಾನೆ. ಹಿಂದೆ ಮುಂದೆ ನೋಡಿ ಉಪಯೋಗವಿಲ್ಲ."

ಹೀಗೆ ಇಲ್ಲಿ ಊಟದ ವ್ಯವಸ್ಥೆ ನಡೆದಾಗ, ಊರಲ್ಲಿ "ಸಂಜೆ ನಗರಭವನದ ಬಯಲಿನಲ್ಲಿ ಜಾಹೀರ ಸಭೆ ಸೇರುವುದಿದೆ. ಪಂಡಿತ ಹಿರಿಯ ರಾಮಾಶಾಸ್ತ್ರಿಗಳು ರಾಜನೈತಿಕ ಸಮಸ್ಯೆಯ ಮೇಲೆ ಭಾಷಣವೀಯುವವರಿದ್ದಾರೆ. ಎಲ್ಲರೂ

ಬರಬೇಕು" ಎಂದು ಡಂಗುರ ಸಾರಲಾಯಿತು. ಪಂಡಿತರು ಎಂದೂ ರಾಜ-ಕೀಯ ಕ್ಷೇತ್ರದಲ್ಲಿ ಭಾಗವಹಿಸಿದವರಲ್ಲ. ಆದಕ್ಕೆ ಅವರ ಭಾಷಣ ಹೇಗಿರು-ವುದೋ ನೋಡಬೇಕೆಂದು ಜನರೆಲ್ಲ ನೆರೆದರು. ಶಾಸ್ತ್ರಿಗಳು ಯಥೇಚ್ಛವಾಗಿ ಭೋಜನವನ್ನು ಮಾಡಿ ಸಭಾಸ್ಥಾನಕ್ಕೆ ಹೊರಟರು. ಅವರಿಗೆ ಹೆಜ್ಜೆ ಕಿತ್ತಿಡ ಲಾಗದಷ್ಟು ಹೊಟ್ಟೆ ತುಂಬಿದ್ದಿತು. ಅವರು ಅಲ್ಲಿ ಮುಟ್ಟಿದೊಡನೆ ಜನರು ವಿನಯದಿಂದ ಕೈಮುಗಿದು ಕುಳಿತರು. ಶಾಸ್ತ್ರಿಗಳ ಭಾಷಣಕ್ಕೆ ಮೊದಲಾಯಿತು.

"ನಾಗರಿಕರೇ, ವ್ಯಾಪಾರಿಗಳೇ, ಮಹಾಜನರೇ, ಕಾಂಗ್ರೆಸ್ಸಿಗರ ಆದೇಶದ ಮೇರೆಗೆ ತಾವು ವ್ಹಾಯಿಸರಾಯರು ಬಂದ ದಿನ ಹರತಾಳ ಮಾಡುವಿರೆಂದು ಕೇಳಿದ್ದೇನೆ. ಇದೆಂತಹ ಕೃತಘ್ನತೆ!! ಇಚ್ಛಿಸಿದರೆ ಅವರು ನಿಮ್ಮನ್ನು ತೋಫಿನ ಬಾಯಿಗೆ ಕೊಡಲೂ ಹಿಂದುಮುಂದೆ ನೋಡಲಾರರು. ಮನಸ್ಸು ಮಾಡಿದರೆ ನಿಮ್ಮನ್ನು ಜೀವಂತ ಹುಗಿಯಬಹುದು. ಅರಸರೊಡನೆ ಹುಡುಗಾಟ ಸರಿ ಯಾದುದಲ್ಲ. ನಗೆ ಹೋಗಿ ಹೊಗೆಯಾದೀತು. ಅವರು ಬಯಸಿದರೆ ಉಗಿ ಬಂಡಿ ನಿಲ್ಲಿಸಬಹುದು; ಅಂಚೆ ತಡೆಹಿಡಿಯಬಹುದು. ನಿಮ್ಮೆಲ್ಲರನ್ನು ಸೆರೆ-ಯಲ್ಲಿರಿಸಬಹುದು. ಅವರನ್ನು ತಪ್ಪಿಸಿ ಎಲ್ಲಿಯಾದರೂ ಓಡಿಹೋಗಬಲ್ಲಿರಾ? ನೀವು ಈ ದೇಶದಲ್ಲಿ ಅವರ ಕೈಯಲ್ಲಿ ಇದ್ದೀರಿ ಎಂಬುದನ್ನು ಮರೆಯದಿರಿ. ಗಂಟುಬೇನೆಯ ಕ್ರಿಮಿಗಳನ್ನು ಊರಲ್ಲಿ ಹರಡಿಬಿಟ್ಟರೇನು ಗತಿ? ನೀವೆಲ್ಲ ಪೊರಕೆ ಯಿಂದ ಬಿರುಗಾಳಿ ನಿಲ್ಲಿಸಲು ಹೊರಟಿದ್ದೀರಿ. ಯಾರಾದರೂ ಹರತಾಳ ಪಾಲಿಸಿದರೆ ನೋಡಿಟ್ಟುಕೊಳ್ಳಿ, ನಾನು ಇಲ್ಲಿಯೆ— ಇದೇ ಸ್ಥಳದಲ್ಲಿಯೇ ಕುಳಿತು ಅನಶನ ವ್ರತ ಪ್ರಾರಂಭಿಸಿಬಿಡುವೆ."

ಒಬ್ಬ ಮಹಾಶಯ ಎದ್ದು ನಿಂತು ಕೇಳಿದ, "ಪಂಡಿತರೇ, ತಮ್ಮ ಪ್ರಾಣ ಹೋಗಲು ಕನಿಷ್ಟ ಒಂದು ತಿಂಗಳಾದರೂ ಬೇಕು. ಅಂದಬಳಿಕ ಮೂರು ದಿನಗಳಲ್ಲಿ ಏನು ಆದೀತು?"

ಶಾಸ್ತ್ರಿಗಳೂ ಗರ್ಜಿಸಿ ನುಡಿದರು, "ಪ್ರಾಣ ಶರೀರದಲ್ಲಿ ಇರುವುದಿಲ್ಲ. ಬ್ರಹ್ಮಾಂಡದಲ್ಲಿರುತ್ತದೆ. ಬಯಸಿದರೆ ಯೋಗಬಲದಿಂದ ಕೂಡ ಪ್ರಾಣತ್ಯಾಗ ಮಾಡಬಲ್ಲೆ. ನಾನಂತೂ ತಮಗೆ ಎಚ್ಚರಿಕೆಕೊಟ್ಟದ್ದೇನೆ. ಇನ್ನು ತಾವಾ-ಯಿತು; ತಮ್ಮ ಕೆಲಸವಾಯಿತು. ನನ್ನ ಹೇಳಿಕೆ ಮನ್ನಿಸಿದರೆ ನಿಮಗೆ ಕಲ್ಯಾ-

ಣವೇ ಆದೀತು. ಮನ್ನಿಸದಿದ್ದರೆ ಬ್ರಹ್ಮಹತ್ಯೆಯ ಪಾಪ ನಿಮ್ಮ ತಲೆಯ ಮೇಲೆ ಬಂದೀತು. ಹೂಂ. ಇಲ್ಲಿಯೇ ಕೂಡ್ರುವೆ."

೩

ನಗರದಲ್ಲಿ ಈ ಸುದ್ದಿ ಹಬ್ಬಿ ಜನಗಳೆಲ್ಲ ಮಂಕರಾದರು. ಅಧಿಕಾರಿಗಳ ಈ ಹೊಸ ಕುಯುಕ್ತಿಯಿಂದ ಅವರು ಬುದ್ಧಿಭ್ರಷ್ಟರಂತಾದರು. ಕಾಂಗ್ರೆಸ್ಸಿಗರು ಇನ್ನೂ ಹೇಳುತ್ತಲಿದ್ದರು, "ಇದೆಲ್ಲ ಬರಿಯ ಬೂಟಾಟಿಕೆ. ರಾಜನಿಷ್ಠರನೇಕರು ಹಣಕೊಟ್ಟು, ಈ ತೊಂದರೆಯನ್ನು ನಿಮ್ಮೆದುರಿಗೆ ತಂದೊಡ್ಡಿದ್ದಾರೆ. ಸೈನ್ಯ, ಪೋಲೀಸುಖಾತೆ, ಕಾಯ್ದೆ ಮುಂತಾದ ಎಲ್ಲ ಯುಕ್ತಿಗಳೂ ನಿಷ್ಫಲವಾದೊಡನೆ ಈ ಕೊನೆಯ ಯುಕ್ತಿಯನ್ನು ರಚಿಸಿದ್ದಾರೆ. ಇಲ್ಲವಾದರೆ ದೇಶದ ಕಠಿಣ ಪರಿಸ್ಥಿತಿಯನ್ನು ಕಂಡು ಉಪವಾಸ ಮಾಡುವಂತಹ ದೇಶಭಕ್ತರೇ ಶಾಸ್ತ್ರಿಗಳು? ಇವರನ್ನು ಸಾಯಗೊಡಿರಿ. ಆಗ ಇವರ ನಿಜವಾದ ಉದ್ದೇಶ ಗೊತ್ತಾದೀತು. ಇಂತಹ ಸಸಿ ಬೇರೂರುವ ಮೊದಲೇ ಕಿತ್ತಿಹಾಕಿಬಿಡಿರಿ, ಇಲ್ಲವಾದರೆ ಪ್ರತಿ ಸಲ ಅಧಿಕಾರಿಗಳು ಈ ಯುಕ್ತಿಯನ್ನು ಕೈಕೊಳ್ಳಬಹುದು."

ಆದರೆ ನಗರದಲ್ಲಿಯ ಧರ್ಮಭೀರುಗಳಾದ ವ್ಯಾಪಾರಸ್ಥರನೇಕರು ಇದಕ್ಕೆ ಹೆದರಿ ಕಾಂಗ್ರೆಸ್ಸಿಗರಿಗೆ ಪ್ರತಿ ಹೇಳುತ್ತಿದ್ದರು, "ತಮ್ಮ ಹೇಳಿಕೆಯಂತೆ ಈ ಮೊದಲು ಸರಕಾರದವರಿಗೆ ವಿರುದ್ಧರಾದೆವು. ಇದರಿಂದ ಎಷ್ಟೋ ಅಂಗಡಿಗಳು ಬುಡಮೇಲಾಗಿ ಹೋದವು. ಕರ (ಟ್ಯಾಕ್ಸ್) ಬೆಳಿಸಿದರು. ಆದಕ್ಕೆ ಒಪ್ಪಿದೆವು. ಆದರೆ ಧರ್ಮದ ಬಗ್ಗೆ ಹಾಗೆ ಮಾಡಲಾದೀತೇ? ಒಬ್ಬ ವಿದ್ವಾನ್, ಕುಲೀನ, ಧರ್ಮನಿಷ್ಠ ಬ್ರಾಹ್ಮಣನು ನಮಗೋಸುಗ ಅನ್ನ ನೀರುಗಳನ್ನು ತ್ಯಜಿಸಿದಾಗ ನಾವು ಸುಖದಿಂದ ಉಂಡು ಮಲಗುವುದು ಉಚಿತವೇ? ಅವನೆಲ್ಲಾದರೂ ಸತ್ತುಹೋದರೆ, ದೇವರಿಗೆ ಏನು ಹೇಳಬೇಕು?"

ಕಾಂಗ್ರೆಸ್ಸಿಗರದು ಒಂದೂ ನಡೆಯಲಿಲ್ಲ. ವ್ಯಾಪಾರಿಗಳ ತಂಡವೊಂದು ರಾತ್ರಿ ಒಂಬತ್ತು ಗಂಟೆಗೆ ಶಾಸ್ತ್ರಿಗಳ ಬಳಿಗೆ ಹೋಯಿತು.

ಶಾಸ್ತ್ರಿಗಳು ಅಂದು ಕಂಠಪೂರ್ತಿ ಹೊಡೆದು ಬಂದಿದ್ದರು. ಹಾಗೆ ಊಟ ಮಾಡುವುದು ಅವರಿಗೇನೂ ಅಸಾಮಾನ್ಯವಾಗಿರಲಿಲ್ಲ. ಮನೆಯ

ಯಜಮಾನನ ಆಗ್ರಹದ ಮೇರೆಗೆ, ಅಡುಗೆ ರುಚಿಯ ಮೇರೆಗೆ ಅವರಿಗೆ ಕಂಠ ಪೂರ್ತಿ ಹೊಡೆದು ರೂಢಿಯಾಗಿದ್ದಿತು. ಸಂಜೆಯ ಊಟದ ವೇಳೆಯಾದೊಡನೆ ಅವರ ಎದೆ ತುಡಿಯತೊಡಗಿತು. ಹಸಿವೆಯಾಗಿತ್ತೆಂತಲ್ಲ; ಬರಿಯ ಬಾಯಿಯ ಚಪಲತೆ. ಶಾಸ್ತ್ರಿಗಳಿಗೆ 'ಯಾವನಾದರೂ ತಿಂಡಿಯ ಗಾಡಿಯವನನ್ನು ಕರೆಯಲೇ?' ಎನ್ನಿಸಿತು. ಆದರೆ ಅಧಿಕಾರಿಗಳು ಶಾಸ್ತ್ರಿಗಳ ರಕ್ಷಣೆಗೆಂದು ನಾಲ್ಕೈದು ಜನ ಪೋಲಿಸರನ್ನಿಟ್ಟಿದ್ದರು. 'ಇವರನ್ನು ಹೇಗಾದರೂ ಮಾಡಿ ದೂರಮಾಡಿದರೆ ಎಲ್ಲ ಸುಸೂತ್ರ ಸಾಗಬಹುದು ನಾನೇನು ಕೈದಿಯೇನು, ಹೀಗೆ ಸುತ್ತಲೂ ಪೋಲಿಸರನ್ನಿಟ್ಟುಕೊಳ್ಳಲು?' ಎಂದು ಶಾಸ್ತ್ರಿಗಳು ಯೋಚಿಸಿದರು. ಕಾಂಗ್ರೆಸ್ಸಿಗರು ಶಾಸ್ತ್ರಿಗಳನ್ನು ಅಲ್ಲಿಂದ ಓಡಿಸಲು, ಇಲ್ಲವೆ ಅವರ ಮೇಲೆ ಕಲ್ಲು ಒಗೆಯಲು ಅಥವಾ ಅವರ ಮೇಲೆ ನಾಯಿ ಬಿಡಲು ಯತ್ನಿಸಬಾರದೆಂದೇ ಅಧಿಕಾರಿಗಳು ಶಾಸ್ತ್ರಿಗಳಿಗೆ ಅಂಗರಕ್ಷಕರನ್ನು ಕೊಟ್ಟಿದ್ದರು.

ಶಾಸ್ತ್ರಿಗಳು ಹೀಗೆ ಯೋಚಿಸುತ್ತಿರುವಾಗಲೇ ವ್ಯಾಪಾರಿಗಳ ತಂಡವೊಂದು ಬಂದು ಮುಟ್ಟಿತು. ಅವರನ್ನು ನೋಡಿದೊಡನೆ ಮೊಳಕೈಯೂರಿ ಮಲಗಿಕೊಂಡ ಶಾಸ್ತ್ರಿಗಳು ಸಾವರಿಸಿಕೊಂಡು ಎದ್ದು ಕುಳಿತರು. ವ್ಯಾಪಾರಿಗಳ ಮುಂದಾಳುಗಳು ಶಾಸ್ತ್ರಿಗಳ ಪಾದಮುಟ್ಟಿ ಕೇಳಿದರು, "ಪಂಡಿತರೇ, ತಮ್ಮದೇಕೆ ನಮ್ಮ ಮೇಲೆ ಇಷ್ಟು ಕೋಪ? ತಮ್ಮ ಆಜ್ಞೆ ನಮಗೆ ಶಿರೋಧಾರ್ಯ. ತಾವು ಎದ್ದು ಅನ್ನ ನೀರು ಸೇವಿಸುವ ಕೃಪೆ ಮಾಡಬೇಕು ತಾವು ನಿಜವಾಗಿ ವ್ರತಮಾಡುವವರೆಂದು ನಾವು ಅರಿತಿರಲಿಲ್ಲ. ಹಾಗಾದರೆ ತಮ್ಮಂತೆ ಮೊದಲೇ ನಡೆದುಕೊಳ್ಳುತ್ತಿದ್ದೆವು. ದಯವಿಟ್ಟು ನಮ್ಮ ವಿನಂತಿಯನ್ನು ಕೇಳಿಕೊಳ್ಳಿರಿ. ನಾವು ಎಂದಿಗೂ ವಚನ ಮುರಿಯುವವರಲ್ಲ"

"ಈ ಕಾಂಗ್ರೆಸ್ಸಿಗರು ನಿಮ್ಮನ್ನು ಮಣ್ಣುಪಾಲು ಮಾಡುವರು. ತಾವು ಮುಳುಗುವುದಂತೂ ಸೈ, ಅಲ್ಲದೆ ನಿಮ್ಮನ್ನೂ ಕಟ್ಟಿಕೊಂಡೇ ಮುಳುಗುವರು. ಪೇಟೆ ಮುಚ್ಚಿದರೆ ಅದರಿಂದ ನಿಮಗೇ ಹಾನಿ. ಸರಕಾರಕ್ಕೇನು? ನೀವು ನೌಕರಿ ಬಿಟ್ಟರೆ ಹಸಿವೆಯಿಂದ ಕಂಗಾಲಾಗಿ ಸಾಯುವಿರಿ. ನೀವು ಜೇಲಿಗೆ ಹೋದರೆ ಹಣಬೀಳು ದುಡಿಯಬೇಕಾಗುವುದು. ಇದರಿಂದ ಸರಕಾರಕ್ಕೆ ಹಾನಿಯೇ ಇಲ್ಲ. ಇವರಿಗೇನು ಹುಚ್ಚುಹಿಡಿದಿದೆಯೋ ಯಾರು ಬಲ್ಲರು? ತಮ್ಮ ಮೂಗನ್ನೂ ಕೊಯ್ದುಕೊಳ್ಳುವರು, ಇತರರ ಮೂಗನ್ನೂ ಕೊಯ್ಯುವರು.

ನೀವು ಈ ಹುಚ್ಚರು ಹೇಳಿದಂತೆ ಕುಣಿದಾಡುವಿರಿ ಅಂಗಡಿಗಳನ್ನೆಲ್ಲ ತೆರೆದಿ-ವಿಡುರಷ್ಟೇ?" ಎಂದು ಶಾಸ್ತ್ರಿಗಳು ಗಂಭೀರಭಾವದಿಂದ ಕೇಳಿದರು

ಮುಂದಾಳುಗಳಲ್ಲೊಬ್ಬ ಹೇಳಿದ, "ಶಾಸ್ತ್ರಿಗಳೇ, ನಮ್ಮ ಎಲ್ಲ ವ್ಯಾಪಾರಿಗಳ ಸಭೆ ಸೇರಿ ನಿರ್ಣಯವಾಗದೆ, ನಾವೇನು ಹೇಳೋಣ? ನಾಳೆ ಕಾಂಗ್ರೆ-ಸ್ಸಿಗರು ನಮ್ಮ ಅಂಗಡಿ ಲೂಟಿ ಮಾಡಿದರೇನು ಮಾಡುವುದು? ಅದಕ್ಕೇ ನಾಳೆ ಸಭೆ ಸೇರಿಸಿ ಆದ ನಿರ್ಣಯವನ್ನು ತಮಗೆ ತಿಳಿಸುತ್ತೇವೆ. ತಾವು ಎದ್ದು, ಊಟ ಸ್ವೀಕರಿಸಬೇಕು."

"ಊಹೂಂ ಆಗದು ಸಭೆಯ ನಿರ್ಣಯ ತಿಳಿಸಿದಾಗಲೇ ಏನೆಂಬುದನ್ನು ತಿಳಿಸುವೆ" ಶಾಸ್ತ್ರಿಗಳು ದರ್ಪದಿಂದ ಹೇಳಿದರು.

ವ್ಯಾಪಾರಿಗಳ ತಂಡ ಹಿಂದಿರುಗುತ್ತಿದ್ದಾಗಲೇ ಶಾಸ್ತ್ರಿಗಳು ಮೆಲ್ಲನೆ ಕೇಳಿದರು, "ಯಾರ ಹತ್ತಿರಲಾದರೂ ಸ್ವಲ್ಪ ನಶ್ಯ ಇದೆಯೇನು?"

ಮಹಾಶಯನೊಬ್ಬ ತನ್ನ ಡಬ್ಬಿಯನ್ನಿತ್ತ

೮

ಜನಸಂದಣಿ ಚದರಿದ ಮೇಲೆ ಶಾಸ್ತ್ರಿಗಳು ಪೋಲಿಸರಿಗೆ ಕೇಳಿದರು, "ಇಲ್ಲೇಕೆ ನಿಂತಿದ್ದೀರಿ?"

"ಒಡೆಯರ ಅಪ್ಪಣೆಯಾಗಿದೆ ನಾವೇನು ಮಾಡೋಣ?"

"ಇಲ್ಲಿಂದ ಹೊರಟುಹೋಗಿರಿ."

"ತಮ್ಮ ಹೇಳಿಕೆಯ ಮೇರೆಗೆ ಹೋಗಬೇಕೇ? ನೌಕರಿ ಹೋದರೆ ನೀವು ಹೊಟ್ಟೆಗೆ ಹಾಕುತ್ತೀರೇನು?"

"ನಾವು ಹೇಳುತ್ತೇವೆ. ಹೊರಟುಹೋಗಿರಿ. ಇಲ್ಲವೆ ನಾವೇ ಎದ್ದು ಹೋಗುತ್ತೇವೆ. ನಾವೇನು ಸೆರೆಯಾಳುಗಳೇನು?"

"ಹೊರಟುಹೋಗುವಷ್ಟು ಶಕ್ತಿಯಾದರೂ ಇದೆಯೇನು?"

"ಶಕ್ತಿಯೇಕಿಲ್ಲ? ನೋಡಿರಿ ಹಾಗಾದರೆ."

"ತೋರಿಸಿರಿ ನಿಮ್ಮ ಶಕ್ತಿ! ನಾವೂ ನೋಡುತ್ತೇವೆ, ಒಂದು ಕೈ."

ಶಾಸ್ತ್ರಿಗಳು ಎದ್ದು ನಿಂತರು ಎದ್ದವರೇ ಬದಿಯಲ್ಲಿದ್ದ ಪೋಲೀಸನೊಬ್ಬನನ್ನು ಒಳಿತಾಗಿ ನೂಕಿಬಿಟ್ಟರು. ಆತ ಹತ್ತು ಹೆಜ್ಜೆಯ ಮೇಲೆ ಮುಗ್ಗರಿಸಿ ಬಿದ್ದ. ಉಳಿದ ಪೋಲೀಸರ ಶಕ್ತಿಯೆಲ್ಲ ಉಡುಗಿಹೋಯಿತು. ಅವರು 'ಶಾಸ್ತ್ರಿಗಳೊಬ್ಬರು ಕೈಲಾಗದ ಹೇಡಿಗಳೆಂ'ದು ಬಗೆದಿದ್ದರು ಆದರೀಗ ದೂರದಲ್ಲಿ ಹೋಗಿ ನಿಂತರು

ಈಗ ರಾಮಾಶಾಸ್ತ್ರಿಗಳು, 'ಎಲ್ಲಿಯಾದರೂ ಗಾಡಿಯುವ ಬರುತ್ತಾನೆಯೆ?' ಎಂದು ನಿರೀಕ್ಷಿಸತೊಡಗಿದರು. ಆದರೆ ಮತ್ತೆ 'ಜನರಿಗೆ ಇದು ತಿಳಿದರೆ ಮೋರೆಯ ಮೇಲೆ ಉಗುಳಬಹುದಲ್ಲ. ಅದಕ್ಕಾಗಿ ಜನರಿಗೆ ಇದು ತಿಳಿಯದಂತೆ ನೋಡಿಕೊಳ್ಳಬೇಕು.' ಎಂದುಕೊಂಡರು. ಅಷ್ಟರಲ್ಲಿ ಶಾಸ್ತ್ರಿಗಳ ಸುದೈವಯೋಗದಿಂದ ಗಾಡಿಯುವನೊಬ್ಬ ಬಂದ. ಹನ್ನೊಂದು ಹೊಡೆದಿದ್ದಿತು. ಸುತ್ತಲೂ ಕತ್ತಲೆ ಆವರಿಸಿದ್ದಿತು. ಶಾಸ್ತ್ರಿಗಳು ಕೂಗಿದರು "ಓ ಗಾಡಿಯುವ" ಗಾಡಿಯುವ ಬಂದ, "ಏನು ಕೊಡಲಿ? ಹೊಟ್ಟೆ ಬಹಳ ಹಸಿದಿದೆಯಲ್ಲವೇ? ಅನ್ನ ನೀರು ಬಿಡುವುದು ಸಾಧುಗಳಿಗೆ ಮಾತ್ರ ಸಾಧ್ಯ. ನಮ್ಮ ನಿಮ್ಮಂತಹ-ರಿಗಲ್ಲ ಸ್ವಾಮಿ."

"ಮೂರ್ಖ, ಅದಕ್ಕಾಗಿ ಅಲ್ಲ. ನಾನೇನು ಸಾಧುವಿಗೆ ಕಡಮೆಯೇ? ತಿಂಗಳುಗಟ್ಟಲೆ ಉಣ್ಣದೆ ತಿನ್ನದೆ ಇರಬಲ್ಲೆ. ನಿನ್ನ ಕೈದೀಪ ತಾ ಇಲ್ಲಿ. ಹಾವು ಹೋದಂತೆ ಕಂಡಿತು ನೋಡೋಣ."

ಗಾಡಿಯುವ ಕೈದೀಪ ಕೊಟ್ಟ ಶಾಸ್ತ್ರಿಗಳು ಅದನ್ನು ಅತ್ತಿತ್ತ ಹೊರಳಿಸಿ, ಕೈಬಿಟ್ಟು ಬಿಟ್ಟರು. ಕೈದೀಪ ಕೆಳಗೆ ಬಿದ್ದು ಅದರಲ್ಲಿನ ಎಣ್ಣೆಯೆಲ್ಲ ಬಿದ್ದು ಹೋಯಿತು. ಗಾಡಿಯುವ ಕೈದೀಪ ಕೈಗೆ ತೆಗೆದುಕೊಂಡು ನೋಡಿದ. ಎಣ್ಣೆಯೇ ಉಳಿದಿರಲಿಲ್ಲ ಕೇಳಿದ, "ಏನು ಪಂಡಿತರೇ, ನಮ್ಮ ದೀಪವನ್ನೆಲ್ಲ ಚರಿದುಮಾಡಿಬಿಟ್ಟಿರಲ್ಲ. ಇನ್ನೇನು ಮಾಡಬೇಕು?"

"ಕೈತಪ್ಪಿ ಬಿದ್ದುಹೋಯಿತು. ಅದಕ್ಕೇನು ಮಾಡಬೇಕು? ಹೂಂ. ಈ ಹಣ ತೆಗೆದುಕೋ. ಎಲ್ಲಿಯಾದರೂ ಎಣ್ಣೆ ತುಂಬಿಸಿಕೊಂಡು ಬಾ."

"ಹಾಗಾದರೆ ಎಣ್ಣೆ ತುಂಬಿಸಿಕೊಂಡು ಈಗ ಬೇಗನೆ ಬರುತ್ತೇನೆ."

"ಗಾಡಿ ಇಲ್ಲಿಯೇ ಇರಲೊಲ್ಲದೇಕೆ? ದೀಪವನ್ನಷ್ಟೇ ಒಯ್ದು ಎಣ್ಣೆ ತುಂಬಿಸಿಕೊಂಡು ಬಾ. ನಾನು ಗಾಡಿ ನೋಡುತ್ತಾ ಇರುತ್ತೇನೆ"

ಈಗ ಮಾತ್ರ ಗಾಡಿಯವನಿಗೆ ಉಭಯಸಂಕಟ ಪ್ರಾಪ್ತವಾಯಿತು. "ಗಾಡಿಯಲ್ಲಿಯ ಹಣದ ಚೀಲ ತೆಗೆದುಕೊಂಡರೆ ಪಂಡಿತರಿಗೆ ಸಂಶಯ ಬರುವುದು, 'ಇವನು ನನ್ನನ್ನು ತುಡಗನೆಂದು ಭಾವಿಸಿದ್ದಾನೆ' ಎಂದು. ಬಿಟ್ಟು-ಹೋದರೆ ಇವನೆಂತಹ ಮನುಷ್ಯ, ಯಾರಿಗೆ ಗೊತ್ತು?"

ಕೊನೆಗೆ ಗಾಡಿಯನ್ನು ಅಲ್ಲಿಯೇ ಬಿಟ್ಟು ಹೋಗುವುದನ್ನು ನಿರ್ಧರಿಸಿ ಹೊರಟ. ಗಾಡಿಯಲ್ಲಿ ಬಹಳ ತಿಂಡಿಗಳೇನೂ ಉಳಿದಿರಲಿಲ್ಲ. ಶಾಸ್ತ್ರಿಗಳು ಯೋಚಿಸಿದರು. "ಇಷ್ಟರಿಂದಲೇ ಏನಾದೀತು? ಮತ್ತೆ ಹಸಿವು ಹೆಚ್ಚಾಗುವುದು. ನಾಚಿಕೆಗೇಡಿಯಾಗಬೇಕಾದೀತು" ಎಂದುಕೊಂಡು ತಮ್ಮ ಸ್ಥಳದಲ್ಲಿ ಕುಳಿತರು. ಆದರೆ ತಿಂಡಿಯನ್ನು ನೋಡಿ ಮತ್ತೆ ಶಾಸ್ತ್ರಿಗಳ ಬಾಯಿಗೆ ನೀರೊಡೆಯಿತು. ತಿಂಡಿಯನ್ನು ಕೈಗೆ ತೆಗೆದುಕೊಂಡರು. ಮೊದಲನೆಯ ಉಂಡಿಯನ್ನು ಬಾಯಿಗೆ ಹಾಕಿಕೊಳ್ಳುವಾಗಲೇ ಗಾಡಿಯವ ಬರುತ್ತಿದ್ದದು ಕಣ್ಣಿಗೆ ಬಿದ್ದಿತು. ಅವನು ಬರುವುದರೊಳಗಾಗಿ ಮಿಠಾಯಿ ತೀರಿಸಬೇಕಾಗಿ-ದ್ದಿತು. ಸಾಧ್ಯವಿದ್ದಷ್ಟು ಬಾಯಿಗೆ ತುರುಕಿಕೊಂಡರು. ಆತ ಬರುತ್ತಲೇ ಇದ್ದ; ಇವರು ತುರುಕಿಕೊಳ್ಳುತ್ತಲೇ ಇದ್ದರು. ಗಾಡಿಯಲ್ಲಿಯ ತಿಂಡಿಗಳೆಲ್ಲ ತೀರಿದುದೇನೋ ನಿಜ ಆದರೆ ಶಾಸ್ತ್ರಿಗಳ ಬಾಯಲ್ಲಿಯ ತಿಂಡಿ ತೀರಿರಲಿಲ್ಲ ಗಾಡಿಯವ ಸಮೀಪಕ್ಕೆ ಬಂದೇಬಿಟ್ಟ. ಶಾಸ್ತ್ರಿಗಳು ಇದುವರೆಗೆ ತಿಂದ ತಿಂಡಿಯ ಬಲ ಉಪಯೋಗಿಸಿ ಉಳಿದುವೆಲ್ಲವನ್ನೂ ಒಮ್ಮೆಲೆ ನುಂಗಿಬಿಟ್ಟರು. ಕಣ್ಣುಗಳಲ್ಲಿ ನೀರು ಬಂದವು, ಕೊರಳು ಉಬ್ಬಿತು. ಪಂಡಿತರು ಜೋರಾಗಿ ಕೆಮ್ಮತೊಡಗಿದರು. ಗಾಡಿಯವ ಹೇಳತೊಡಗಿದ, "ಈ ರೀತಿ ಉಪವಾಸ ಮಾಡುವುದಕ್ಕಿಂತ ಊಟಮಾಡಿಕೊಂಡಿರುವುದೇನು ಕೆಟ್ಟ? ನೀವು ಸತ್ತರೆ ಸರಕಾರಕ್ಕೆ ಆಗುವ ನಷ್ಟ ಅಷ್ಟೇ."

ಶಾಸ್ತ್ರಿಗಳಿಗೆ ಬಹಳ ಸಿಟ್ಟುಬಂದಿತು. ಆದರೆ ಮಾತನಾಡಲಾಗಲೇ ಇಲ್ಲ ಮತ್ತೆ ಕೈದೀಪ ತೆಗೆದುಕೊಂಡು ಅತ್ತಿತ್ತ ನೋಡಿದಂತೆ ಮಾಡಿ ತಿರುಗಿ ಕೊಟ್ಟುಬಿಟ್ಟರು.

"ಸರಕಾರದ ಬಾಲಬಡೆಯುವುದು ತಮಗೇಕೆ ಬೇಕಾಗಿದ್ದಿತು? ಸಭೆ

ಗೂಡಿ ನಿರ್ಣಯವಾಗುವ ವರೆಗೆ ತಾವು ಜೀವಮಾನದಿಂದ ಇರಬಲ್ಲಿರಾ?" ಎಂದು ಹೇಳುತ್ತ ಗಾಡಿಯವ ಹೋಗಿಬಿಟ್ಟ. ಶಾಸ್ತ್ರಿಗಳು ತುಸು ಹೊತ್ತಿನ ವರೆಗೆ ಕೆಮ್ಮಿ ಕೆಮ್ಮಿ ಕೊನೆಗೆ ಮಲಗಿ ಗೊರಕೆ ಹೊಡೆಯಹತ್ತಿದರು.

೫

ಮರುದಿನ ಮುಂಜಾವದಿಂದಲೇ ವ್ಯಾಪಾರಿಗಳಲ್ಲಿ ಓಡಾಟ ಪ್ರಾರಂಭವಾಯಿತು. ಕಾಂಗ್ರೆಸ್ಸಿಗರಲ್ಲಿಯೂ ಯೋಚನೆ ನಡೆದಿದ್ದಿತು. ಪಂಡಿತರುಗಳು ತಮ್ಮದೊಂದು ಸಭೆಕೂಡಿಸಿ, "ಹಿರಿಯ ರಾಮಾಶಾಸ್ತ್ರಿಗಳಿಗೆ ರಾಜನೀತಿಯಲ್ಲಿ ಭಾಗವಹಿಸಲು ಹಕ್ಕಿಲ್ಲ, ಪಂಡಿತರಿಗೂ ರಾಜನೀತಿಗೂ ಎಲ್ಲಿಯ ಸಂಬಂಧ?" ಎಂದು ನಿರ್ಣಯ ಮಾಡಿದರು. ಆದರೆ ಶಾಸ್ತ್ರಿಗಳಿಗೆ ಗುಪ್ತೋಪಚಾರಕ್ಕೆ ಒಬ್ಬರೂ ಬರಲಿಲ್ಲ 'ಶಾಸ್ತ್ರಿಗಳು ಸರಕಾರದಿಂದ ಒಂದು ಸಾವಿರ ರೂಪಾಯಿ ಹಣ ಪಡೆದಿದ್ದಾರೆಂ'ದು ಜನರಲ್ಲಿ ಗುಲ್ಲೆದ್ದಿತು. ಶಾಸ್ತ್ರಿಗಳಿಗೆ ಎದ್ದು ನಿಲ್ಲಲು ಆಗುತ್ತಿರಲಿಲ್ಲ ಕಣ್ಣಿಗೆ ಚಕ್ರ ಬರುತ್ತಿದ್ದಿತು. ಹೀಗೆ ಸಂಜೆಯ ವರೆಗೆ ಚಡಪಡಿಸುತ್ತ ಕಾಲಕಳೆದರು. ನೀರಡಿಕೆಸಾವಾಗಿತ್ತು. ಒಂದು ಹನಿ ನೀರೂ ದೊರೆತಿರಲಿಲ್ಲ. ಕೊನೆಗೆ ತಮ್ಮ ಪತ್ನಿಯ ಮೇಲೆ ರೇಗಿಗದ್ದರು. 'ತಾನು ಮಾತ್ರ ಹೊಟ್ಟೆತುಂಬ ಉಂಡು ಸಾಕಷ್ಟು ನೀರು ಕುಡಿದು ಮಲಗಿದ್ದಾಳು. ಆದರೆ ನಾನು ಸತ್ತಿದ್ದೇನೋಇಲ್ಲವೋಎಂಬುದನ್ನು ನೋಡಲಿಕ್ಕಾದರೂ ಬರಬಾರದೇ! ಒಂದೆರಡು ಮಾತನಾಡುವ ನೆವದಿಂದಲಾದರೂ ತಿಂಡಿ ತಂದು ಕೊಡಬಹುದಾಗಿತ್ತಲ್ಲ! ಅವಳಿಗೇತರ ಚಿಂತೆ? ನನಗೆ ಕೊಟ್ಟ ರೂಪಾಯಿ ಕಸಿದು ಕೊಂಡಳು. ಇನ್ನು ಕೊಡಬಹುದಾದುದನ್ನೂ ಕಸಿದುಕೊಂಡಾಳು !'

ಆದರೆ ಇದೆಲ್ಲ ಸಿಟ್ಟನ್ನು ಶಾಸ್ತ್ರಿಗಳು ಯಾರ ಮೇಲೆ ತೀರಿಸಿಕೊಳ್ಳುವದು? ಒಂದು ಹುಳವೂ ಕಣ್ಣಿಗೆ ಬೀಳಲಿಲ್ಲ. ಜನರಿಗಂತೂ, "ಶಾಸ್ತ್ರಿಗಳು ಸರಕಾರದಿಂದ ಹಣ ಪಡೆದು ಈ ಸೋಗು ಹಾಕಿದ್ದಾರೆಂ"ಬುದರಲ್ಲಿ ಸಂಪೂರ್ಣ ನಂಬುಗೆ ಹುಟ್ಟಿತು.

ರಾತ್ರಿ ಒಂಬತ್ತಾಗಿದ್ದಿತು. "ಪಂಡಿತರು ಸ್ವಾರ್ಥಮಯರಾಗಿ ಈ ಕೆಲಸಕ್ಕೆ ಕೈಹಾಕಿದ್ದಾರೆ. ಒಬ್ಬ ಬ್ರಾಹ್ಮಣ ನಮಗೋಸುಗ ಅನ್ನ ಜಲ ತ್ಯಾಗ ಮಾಡಿರುವಾಗ ನಾವು ಸುಖದಿಂದ ಉಂಡು ನಲಿಯುವುದು ಧರ್ಮದ ವಿರುದ್ಧ ವೇನೋ ನಿಜ! ಆದರೆ ಆ ಬ್ರಾಹ್ಮಣನು ಅಧರ್ಮದಿಂದ ಹಾಗೆ ಮಾಡಿದಲ್ಲಿ ಧರ್ಮದ ವಿರುದ್ಧವಾಗಲಾರದು ನೀವು ನಿಮ್ಮ ಕರ್ತವ್ಯಪಥಚ್ಯುತರೆಂದು ಯಾರೂ ತಿಳಿದುಕೊಳ್ಳಲಾಗದು" ಎಂದು ತಮ್ಮ ಸಹೋದ್ಯೋಗಿಗಳಿಗೆ, ವ್ಯಾಪಾರಿಗಳ ಮುಂದಾಳುಗಳೊಬ್ಬರು ಹೇಳಿದರು.

"ತಾವು ನಿರ್ಣಯಿಸಿದುದಕ್ಕೆ ನಮ್ಮ ಸಮ್ಮತಿ. ನಾನೂ ತಮ್ಮೊಡನೆ ಬರುವೆ ಆದರೆ ನಾನು ಅವರ ಬಳಿ ಮೊದಲು ಹೋಗುವೆ. ಅವರೊಡನೆ ಹತ್ತು ನಿಮಿಷ ಮಾತನಾಡಬಯಸುತ್ತೇನೆ ನೀವೆಲ್ಲ ಗೇಟಿನ ಬಳಿ ನಿಲ್ಲಿರಿ. ಇದರಿಂದ ಯಾರಿಗೂ ತೊಂದರೆ ಇಲ್ಲವಷ್ಟೇ?" ಕಾಂಗ್ರೆಸ್ ಕಾರ್ಯದರ್ಶಿಗಳು ಕೇಳಿದರು. ತೊಂದರೆ ಯಾರಿಗೂ ಇದ್ದಂತೆ ತೋರಲಿಲ್ಲ.

ಕಾರ್ಯದರ್ಶಿಗಳು ಮೊದಲು ಪೋಲಿಸ್ ವಿಭಾಗದಲ್ಲಿ ಕೆಲಸಮಾಡುತ್ತಿದ್ದರು. ಆದುದರಿಂದ ಅವರಿಗೆ ಯುಕ್ತಿಯಿಂದ ಹಣಕೊಟ್ಟುಮಾಡಿಸುವ ಕೃತ್ಯಗಳೇನು ಹೊಸವಾಗಿರಲಿಲ್ಲ

ಅವರು ನೇರಾಗಿ ಪೇಟೆಗೆ ಹೋಗಿ ಐದು ರೂಪಾಯಿಯ ಅತ್ಯಂತ ಸುಗಂಧದಿಂದೊಡಗೂಡಿದ ಮಿಠಾಯಿ ತಂದರು. ಅವೆಲ್ಲವುಗಳನ್ನು ಒಂದು ಬೆಳ್ಳಿಯ ತಾಟನಲ್ಲಿ ಹಾಕಿಕೊಂಡು ಜೊತೆಗೆ ಒಂದು ಬೆಳ್ಳಿಯ ಲೋಟದಲ್ಲಿ ನೀರು ತುಂಬಿಕೊಂಡು 'ಬ್ರಹ್ಮಪೂಜೆ'ಗೆ ಹೊರಟರು. ಮಿಠಾಯಿಗಳ ಸುವಾಸನೆ ಎಲ್ಲ ದಿಕ್ಕುಗಳಲ್ಲೂ ತಾನೇ ತಾನಾಗಿದ್ದಿತು. ಅವುಗಳನ್ನು ಮೂಸಿದರೆ ಊಟವಾದವನಿಗೆ ಕೂಡ ಹಸಿವು ತೋರುತ್ತಿದ್ದಿತು. ಅಂದಬಳಿಕ ಹಸಿವಾದವನದೇನು ಪಾಡು?

ಪಂಡಿತರು ಅರಿವಿಲ್ಲದವರಂತೆ ನೆಲದ ಮೇಲೆ ಬಿದ್ದಿದ್ದರು. ಹಿಂದಿನ ರಾತ್ರಿ ಏನೂ ಸಿಕ್ಕಿರಲಿಲ್ಲ. ಸಿಕ್ಕಿದುದು ಕೂಡ ರಾವಣನ ಹೊಟ್ಟೆಗೆ ಅರೆಕಾಸಿನ ಮಜ್ಜಿಗೆಯಂತೆ. ಅಂದು ಮಧ್ಯಾಹ್ನವೂ ಏನೂ ದೊರೆತಿರಲಿಲ್ಲ. ಹೀಗಾಗಿ

ಪಂಡಿತರಲ್ಲಿದ್ದ ಶಕ್ತಿಯೆಲ್ಲ ಶಿಥಿಲವಾಗಿ ಹೋಗಿದ್ದಿತು ಕಣ್ಣು ತೆರೆದಿರಲಿಲ್ಲ. ತೆರೆದರೂ ಅವು ತಾವಾಗಿಯೇ ಮುಚ್ಚುತ್ತಿದ್ದವು ತುಟಿಗಳು ಒಣಗಿಹೋಗಿದ್ದವು. ಅವರ ನೆರಳು ಏಕೆ ಮಾತ್ರ ಅವರು ಜೀವಂತರೆಂದು ತೋರಿಸಿಕೊಡಲು ಯತ್ನಿಸುತ್ತಿದ್ದಿತು ಇಂತಹ ಸಂಕಟ ಅವರ ಜೀವಮಾನದಲ್ಲೊಮ್ಮೆಯೂ ಬಂದಿರಲಿಲ್ಲ ಅವರು ನಾಗರಿಕರಿಗೆ, ವ್ಯಾಪಾರಿಗಳಿಗೆ, ಸರಕಾರಕ್ಕೆ, ಕಾಂಗ್ರೆಸ್ಸಿಗೆ, ಧರ್ಮಪತ್ನಿಗೆ ಇಷ್ಟೇ ಏಕೆ ಈಶ್ವರನಿಗೂ ತೃಪ್ತಿಯಾಗುವಷ್ಟು ಬೈದರು. 'ತಾವು ಆ ರಾತ್ರಿ ಕೈಲಾಸವಾಸಿಗಳಾಗುತ್ತೇವೆ'ಂದು ಶಾಸ್ತ್ರಿಗಳಿಗೆ ಸಂಪೂರ್ಣ ವಿಶ್ವಾಸವೆನಿಸತೊಡಗಿತು.

"ಶಾಸ್ತ್ರಿಗಳೇ," ಕಾರ್ಯದರ್ಶಿಗಳು ಕೂಗಿದರು. ಶಾಸ್ತ್ರಿಗಳು ಪ್ರಯತ್ನಪಟ್ಟು ನಿದಾನವಾಗಿ ಕಣ್ಣು ತೆರೆದರು. ಕಾರ್ಯದರ್ಶಿಗಳು ತಾವು ತಂದಿದ್ದ ಬೆಳ್ಳಿಯ ತಾಟನ್ನು ಅವರ ಮುಂದೆ ಇಟ್ಟು, "ಇನ್ನು ಎಷ್ಟು ಹೊತ್ತಿನ ವರೆಗೆ ಹೀಗೆಯೇ ಇರುವುದು?" ಎಂದು ಕೇಳಿದರು. ಅದರ ಸುಗಂಧವನ್ನು ಮೂಸಿದ ಶಾಸ್ತ್ರಿಗಳಿಗೆ ಸ್ವಲ್ಪ ಶಕ್ತಿ ಬಂದಂತಾಗಿ ಎದ್ದು ಕುಳಿತರು. "ಆಗುವ ವರೆಗೆ ಆಗಲಿ" ಎಂದರು.

"ಇದುವರೆಗೂ ಸಭೆ ಕೂಡಲಿಲ್ಲ ನಾಳೆ ಸಂಜೆಗೆ ವ್ಹಾಯಿಸರಾಯರು ಬರಬಹುದು. ಅಲ್ಲಿಯ ವರೆಗೆ ತಮ್ಮ ಗತಿಯೇನು? ತಮ್ಮ ಮೋರೆಯಂತೂ ಸಂಪೂರ್ಣ ನಿಸ್ತೇಜವಾಗಿಹೋಗಿದೆ."

"ನನಗೆ ಇಲ್ಲಿಯೇ ಮರಣವೆಂದು ತೋರುತ್ತದೆ. ಈ ತಾಟಿನಲ್ಲಿ ಹಾಲಿನ ಕೆನೆಯ ಬರ್ಫಿ ಇದೆಯೇನು?"

ಕಾರ್ಯದರ್ಶಿ 'ಬ್ರಹ್ಮಪೂಜೆ'ಗೆ ಬರುತ್ತಿದ್ದಾಗ 'ಬ್ರಹ್ಮರಕ್ಷಕ'ರು ಅವರನ್ನು ತಡೆದರು. ಕೂಡಲೆ ಕಾರ್ಯದರ್ಶಿಗಳು, ತಾವು ಹಾಗೆ ಮಾಡುವುದು ಅಯೋಗ್ಯವೆಂದು ಕಂಡುಬಂದರೂ ಕೂಡ, ಅವರ ಕೈಯಲ್ಲಿ ನಾಲ್ಕಾಣೆಯ ನಾಣ್ಯವೊಂದನ್ನಿಟ್ಟು ಸಾಗಿಬಂದರು.

"ಹೌದು. ಅನೇಕ ತರಹದ ತಿಂಡಿಗಳಿವೆ. ನಮ್ಮ ಸಂಬಂಧಿಕರೊಬ್ಬರಿಗೆ ಬಾಗಿನ ಮುಟ್ಟಿಸಬೇಕಾಗಿದೆ. ಅದಕ್ಕಾಗಿ ಹೊರಟಿದ್ದೇನೆ"

"ಎಷ್ಟೊಂದು ಪರಿಮಳ! ಸ್ವಲ್ಪ ತೆಗೆದುತೋರಿಸಿರಿ."

ಕಾರ್ಯದರ್ಶಿಗಳು ಮುಗುಳುನಗೆ ನಗುತ್ತ ಅವನ್ನು ಸ್ವಲ್ಪ ಬಿಡಿಸಿ ಇಟ್ಟರು. ಶಾಸ್ತ್ರಿಗಳ ಬಾಯಿಗಂತೂ ಒಂದೇ ಸವನೆ ನೀರೊಡೆಯತೊಡಗಿತು.

"ತಮ್ಮ ವ್ರತವಿರದಿದ್ದರೆ ತಮಗೂ ತಿನ್ನಲು ಸಾಧ್ಯವಾಗುತ್ತಿದ್ದಿತು. ಐದು ರೂಪಾಯಿಗೆ ಸೇರು ನೋಡಿ" ಕಾರ್ಯದರ್ಶಿಗಳು ಹೇಳಿದರು.

"ಹಾಗಾದರೆ ಬಹಳ ಉಚ್ಚ ಪ್ರತಿಯವಾಗಿರಬೇಕು. ನಾನು ಕೆನೆ-ಬರ್ಫಿ ತಿನ್ನದೆ ಬಹಳ ದಿನಗಳಾದವು."

"ತಾವು ವಿನಾಕಾರಣ ತಮ್ಮ ಮೇಲೆ ಇಂತಹ ವಿಪತ್ತು ಒಡ್ಡಿಕೊಂಡಿ-ದ್ದೀರಿ. ಜೀವವೇ ಇಲ್ಲದಿದ್ದರೆ ಹಣದ ಬೆಲೆಯೇನು?"

"ಏನು ಮಾಡಲಿ? ಮೋಸ ಹೋಗಿದ್ದೇನೆ. ಇಲ್ಲದಿದ್ದರೆ ಇಷ್ಟೊಂದು ಮಿಠಾಯಿ ತಿನ್ನುವ ಸುಯೋಗ ದೊರಕುತ್ತಿದ್ದಿತು." ಎಂದು ಶಾಸ್ತ್ರಿಗಳು ತಿಂಡಿ ಮುಟ್ಟಿ ನೋಡುತ್ತ, "ಭೋಲಾನ ಅಂಗಡಿಯಿಂದ ತಂದಿದ್ದೀರಾ ?" ಎಂದು ಕೇಳಿದರು.

"ಒಂದೈದಾರು ತಿನ್ನಬಹುದಲ್ಲ!"

"ಏನು ತಿನ್ನಲಿ! ಧರ್ಮಸಂಕಟದಲ್ಲಿ ಸಿಲುಕಿ ಬಿದ್ದಿದ್ದೇನೆ."

"ತಿನ್ನಿ, ತಿನ್ನಿ, ಇಂತಹ ಸಮಯದಲ್ಲಿ ಆಗುವ ಆನಂದ ಲಕ್ಷರೂಪಾಯಿ ಪಡೆಯುವುದರಿಂದುಂಟಾಗುವ ಆನಂದಕ್ಕಿಂತ ಹೆಚ್ಚಿನದು."

"ನನಗೆ ಯಾರಪ್ಪನ ಅಂಜಿಕೆ? ನಾನಿಲ್ಲಿ ಅನ್ನನೀರಿಲ್ಲದೆ ಬಿದ್ದಿದ್ದೇನೆ. ಆದರೆ ಒಬ್ಬರಾದರೂ ನೋಡಲು ಬಂದರೇ? ಅಂದಬಳಿಕ ನನಗೆ ಯಾರ ಅಂಜಿಕೆ? ಆ ತಾಟು ಇಲ್ಲಿ ತನ್ನಿ. ಶಾಸ್ತ್ರಿಗಳು ವ್ರತ ಮುರಿದರೆಂದು ಎಲ್ಲರಿಗೂ ಹೇಳಿರಿ. ಪೇಟೆ, ವ್ಯಾಪಾರ ಹಾಳಾಗಿ ಹೋಗಲಿ." ಎಂದು ಶಾಸ್ತ್ರಿಗಳು ತಾಟನ್ನು ಮುಂದೆ ಜಗ್ಗಿಕೊಂಡು ತಿನ್ನಲು ಮೊದಲು ಮಾಡಿದರು. ವ್ಯಾಪಾರಿಗಳೆಲ್ಲ ಹೊರಬಾಗಿಲಿಗೆ ನಿಂತಿದ್ದರು

"ಸ್ವಲ್ಪ ಮುಂದೆ ಹೋಗಿ ತಮಾಷೆ ನೋಡಿರಿ. ತಾವು ಅಂಗಡಿ ತೆರೆಯುವ ಆವಶ್ಯಕತೆಯೇ ಇಲ್ಲ. ನಾನೆಲ್ಲ ಸಮಸ್ಯೆಗಳನ್ನು ಸುಲಭವಾಗಿ ಬಿಡಿಸಿದ್ದೇನೆ. ಇದು ನನ್ನ ಯುಕ್ತಿಯ ಪ್ರತಾಪ" ಎಂದು ಕಾರ್ಯದರ್ಶಿಗಳು ಅವರಿಗೆ ಹೋಗಿ ಹೇಳಿದರು

ಸುತ್ತಲೂ ಹಿಟ್ಟು ಚೆಲ್ಲಿದಂತೆ ಬೆಳದಿಂಗಳು ಬಿದ್ದಿದ್ದಿತು. ವ್ಯಾಪಾರಿಗಳೆಲ್ಲ ಬಂದರು. ಮಹಾತ್ಮನೊಬ್ಬ ಸಮಾಧಿಯಲ್ಲಿ ಮಗ್ನನಾದಂತೆ ಶಾಸ್ತ್ರಿಗಳು ತಿನ್ನುವುದರಲ್ಲಿ ಮಗ್ನರಾಗಿದ್ದರು.

"ಶಾಸ್ತ್ರಿಗಳೇ, ತಾವೇಕೆ ಇಷ್ಟು ಗಡಿಬಿಡಿ ಮಾಡಿದಿರಿ. ನಾವು ಸಭೆ ಮಾಡಿದೆವು. ಅದರ ನಿರ್ಣಯವನ್ನು ತಿಳಿಸಲು ನಾವು ಹೀಗೆ ಓಡಿಬರುತ್ತಿರುವಾಗ ತಾವು ವ್ರತ ಮುರಿಯುವುದು ಉಚಿತವೇ?" ವ್ಯಾಪಾರಿಗಳಲ್ಲೊಬ್ಬ ಕೇಳಿದ.

"ನನ್ನ ಕಾರ್ಯ ಕೈಗೂಡಿದಂತಾಯಿತು. ನನಗೆ ಅತ್ಯಂತ ಆನಂದವಾಗಿದೆ. ನನ್ನಲ್ಲಿ ನಿಮಗೆ ಶ್ರದ್ಧೆಯಿದ್ದುದಾದರೆ ಅದೇ ಅಂಗಡಿಯಿಂದ ಇನ್ನಷ್ಟು ಮಿಠಾಯಿ ತರಿಸಿಕೊಡಿರಿ!!" ಶಾಸ್ತ್ರಿಗಳು ಹೇಳಿದರು!



# ಮುಕ್ತಿಮಾರ್ಗ

## ೧

ಡಾಕ್ಟರನಿಗೆ ತನ್ನ ಎದುರಿಗೆ ಕುಳಿತ ರೋಗಿಗಳನ್ನು ನೋಡುವಾಗ ಆಗುವಷ್ಟು ಆನಂದ ಒಕ್ಕಲಿಗನಿಗೆ ತನ್ನ ಹೊಲವನ್ನು ನೋಡುವಾಗ ಆಗು-ತ್ತದೆ. ಝಿಂಗುರ ತನ್ನ ಎದುರಿಗಿದ್ದ ಕಬ್ಬಿನ ತೋಟವನ್ನು ನೋಡುತ್ತ ಕುಳಿತಿದ್ದ. ಮೂರು ಕೂರಿಗೆ ಕಬ್ಬಿನ ತೋಟ. 'ಇದರಿಂದ ಕಡಿಮೆಯೆಂದರೂ ಆರುನೂರು ರೂಪಾಯಿಗಳು ದೊರೆಯುವವು. ದರ ಏರಿದರಂತೂ ದೇವರ ಕೃಪೆ!! ಇನ್ನೆರಡು ಕೂರಿಗೆ ನೆಲ ತೆಗೆದುಕೊಳ್ಳುವುದಕ್ಕಾದೀತು. ಎತ್ತುಗಳೂ ಮುದುಕಾಗಿವೆ. ಬೇರೆ ಜೋಡಿ ತೆಗೆದುಕೊಳ್ಳಬಹುದು.' ಎಂದು ಯೋಚಿಸುತ್ತ, ಝಿಂಗುರ ಬದಿಯಲ್ಲಿ ಬೆಳೆಯಿಸಿದ ಬಟ್ಟಗಡಲೆಯ ಕಾಯಿ ಹರಿಯು-ತ್ತಿದ್ದ.

ಅಷ್ಟರಲ್ಲಿ ಒಂದು ಕುರಿಯ ಹಿಂಡು ತನ್ನ ಕಡೆಗೇ ಬರುತ್ತಿರುವುದು ಅವನ ಕಣ್ಣಿಗೆ ಬಿದ್ದಿತು. " ಇಲ್ಲಿ ಕುರಿ ಹಾಯ್ದು ಹೋದರೆ ಈ ಹೊಲದೊಳಗಿಂದಲೇ ಹಾಯ್ದು ಹೋಗಬೇಕು. ಕುರಿಗಳನ್ನು ಇಲ್ಲಿಂದಲೇ ಏಕೆ ತೆಗೆದುಕೊಂಡು ಹೋಗಬೇಕು? ಅವು ಗಿಡಬಳ್ಳಿಗಳನ್ನು ಹಾಗೆಯೇ ಬಿಟ್ಟಾವೆ? ಓಹೋ! ಬುದ್ಧು ಇದ್ದಾನಲ್ಲವೆ? ಏನು ಅವನ ಸೊಕ್ಕು! ಹೊಲದ ಮಧ್ಯದಿಂದ ಕುರಿ ಒಯ್ಯುತ್ತಾನಲ್ಲ! ನಾನು ನಿಂತುದನ್ನು ನೋಡಿಯೂ ಕೂಡ ಹೊಡೆದುಕೊಂಡು ಬರುತ್ತಿದ್ದಾನಲ್ಲ!" ಎಂದು ಝಿಂಗುರ ಯೋಚಿಸುತ್ತಿದ್ದ. ಕುರಿಯ ಹಿಂಡು ಅವನ ಬಳಿಗೇ ಬಂದಿತು. "ಇಲ್ಲಿಂದ ಕುರಿ ಒಯ್ಯಬಾರದೆನ್ನುವುದು ಕೂಡ ನಿನಗೆ ತಿಳಿಯಬಾರದೆ?" ಝಿಂಗುರ ಬೆದರಿಸಿದ. "ಕ್ಷಮಿಸಿ, ಹಾಗೆ ಹೋದರೆ ಸುತ್ತುಹಾಕಿದಂತಾಗುವದು. ಈಗ ಸರ್‍ರನೆ ತೆಗೆದುಕೊಂಡು ಹೋಗಿ ಬಿಡುತ್ತೇನೆ." ಬುದ್ಧು ನಮ್ರಭಾವದಿಂದ ಹೇಳಿದ. "ನಿನಗೆ ಸುತ್ತುಹಾಕಿದಂತೆ

ಆಗುವುದೆಂದು ನನ್ನ ಹೊಲ ಕೆಡಬೇಕೇನು? ನಾನೆಂದರೆ ಏನೆಂದು ತಿಳಿದಿರುವೆ? ತಿರುಗಿಸು ಇವುಗಳನ್ನು. "

" ಇದೊಂದು ದಿವಸ ಬಿಡಿರಿ. ನಾಳೆ ಹಾಗೆಯೇ ಹಾಯ್ದು ಹೋಗುತ್ತೇನೆ. ಇತ್ತಿಂದ ಹೋಗುವುದೇ ಇಲ್ಲ "

" ತಿರುಗಿಸು ಎಂದು ಹೇಳಲಿಲ್ಲವೆ? ಒಂದು ಕುರಿ ಏನಾದರೂ ಬಾಯಿ ಹಾಕಿದರೆ ನೋಡು, ಆಮೇಲೆ ನಿನ್ನ ಗತಿ!"

" ಹಾಗೆಯೇ ಆಗಲಿ."

ಬುದ್ಧು ತನ್ನ ಮಾತುಗಳನ್ನೆಲ್ಲ ವಿನಯದಿಂದ ಹೇಳುತ್ತಿದ್ದ, ಆದರೆ ತಿರುಗಿಸಲು ಇಷ್ಟಪಡಲಿಲ್ಲ. " ನಾನು ಇಂದು ತಿರುಗಿ ಹೋದರೆ ನಾಳೆ ಮತ್ತೊಬ್ಬನೂ ತಿರುಗಿ ಹೋಗಲು ಹೇಳುವನು, " ಎಂದು ಯೋಚಿಸಿದ.

ಬುದ್ಧು ಪುಷ್ಟಕಾಯದವನಾಗಿದ್ದ. ಅವನ ಹತ್ತಿರ ನೂರಿಪ್ಪತ್ತು ಕುರಿಗಳಿದ್ದವು. ಅವುಗಳನ್ನು ಹೊಲದಲ್ಲಿ ಕೂಡಿಸಲು (ಗೊಬ್ಬರಕ್ಕಾಗಿ) ಒಂದು ರಾತ್ರಿಗೆ ಆರು ರೂಪಾಯಿ ದೊರೆಯುತ್ತಿದ್ದವು. ಅಲ್ಲದೆ ಕುರಿಯ ಉಣ್ಣೆಯ ಕಂಬಳಿ ಬೇರೆ ಮಾಡುತ್ತಿದ್ದ.

ಕುರಿಗಳು ಹಸುರೆಲೆ ನೋಡಿ ಬಳ್ಳಿಗಳ ಕಡೆಗೆ ನುಗ್ಗಿದವು. ಬುದ್ಧು ಅವುಗಳನ್ನು ಬಡಿದು ಬೆದರಿಸಿ ಅಟ್ಟಲು ಮೊದಲುಮಾಡಿದ. ಆದರೂ ಅವು ಕೇಳಲೇ ಇಲ್ಲ. ಝಿಂಗುರ ತನ್ನ ಮಕ್ಕಳನ್ನು ತೊಡೆಯ ಮೇಲಿಂದ ಇಳಿಸಿ ತಾನು ಹೊಡೆಯಲು ಆರಂಭಿಸಿದ. ಬುದ್ಧು ತನ್ನ ಸೇನೆ ವಿಧ್ವಂಸವಾಗುತ್ತಿರುವುದನ್ನು ನೋಡುತ್ತ ನಿಂತಿದ್ದ. ಝಿಂಗುರನೊಡನೆ ಮಾತನಾಡಲೂ ಇಲ್ಲ, ಕುರಿಗಳನ್ನೂ ಕರೆಯಲಿಲ್ಲ. ಎರಡೇ ನಿಮಿಷಗಳಲ್ಲಿ ಝಿಂಗುರ ಬುದ್ಧುವಿನ ಅಪಾರವಾದ ಸೈನ್ಯವನ್ನು ಹೊಡೆದಟ್ಟಿದ. ಮತ್ತು ಹೇಳಿದ, "ಈಗ ನೇರವಾಗಿ ಹೋಗು, ನಾಳಿನಿಂದ ಬರಲಾಗದು, ತಿಳಿಯಿತೆ?"

ಬುದ್ಧು ತನ್ನ ಕುರಿಗಳನ್ನು ನೋಡುತ್ತ ಹೇಳಿದ, "ಝಿಂಗುರ, ಇದು ಸರಿಯಾಗಲಿಲ್ಲ. ಪಶ್ಚಾತ್ತಾಪಪಡುವಿ."

೨

ಒಕ್ಕಲಿಗರೊಡನೆ ಸೇಡು ತೀರಿಸಿಕೊಳ್ಳುವದು ಬಾಳೆಯ ಹಣ್ಣು ತಿನ್ನುವದಕ್ಕಿಂತ ಸುಲಭವಾದ ಕೆಲಸ. ಅವರ ಜೀವ ಹೊಲ. ಹೊಲ ಮುಳುಗಿದರೆ ಒಕ್ಕಲಿಗ ಮುಳುಗಿದಂತೆಯೇ ಸೈ. ಝಿಂಗುರ ಮನೆಗೆ ಬಂದು ಈ ಸಂಗ್ರಾಮದ ವೃತ್ತಾಂತ ನೆರೆಹೊರೆಯವರಿಗೆ ಹೇಳಿದ. ಆಗ ಜನರು ಅವನಿಗೆ ಹೇಳಿದರು, "ಝಿಂಗುರ, ನೀನು ದೊಡ್ಡ ಅನರ್ಥ ಮಾಡಿದೆ. ಏನು ಹುಚ್ಚನೊ! ಬುದ್ಧು ಎಂತಹ ಜಗಳಗಂಟನೆಂಬುದು ನೀನಿನ್ನೂ ಅರಿಯೆ. ಈಗಲಾದರೂ ಅವನ ಬಳಿಗೆ ಹೋಗಿ ಕ್ಷಮೆ ಬೇಡು. ಇಲ್ಲವಾದರೆ ಊರೆಲ್ಲ ಮುಳುಗಿಹೋದೀತು."

ಝಿಂಗುರನಿಗೂ ತಿಳಿಯಿತು ತಾನು ಮಾಡಿದ್ದು ತಪ್ಪಾಯಿತೆಂದು. ಪಶ್ಚಾತ್ತಾಪ ಪಡತೊಡಗಿದ. "ಕುರಿ ಸ್ವಲ್ಪ ಮೇಯ್ದಿದ್ದರೆ ನನಗೆ ಏನು ನಷ್ಟವಾಗುತ್ತಿತ್ತು? ನಿಜವಾಗಿ ಎಲ್ಲರೊಡನೆ ಕೂಡಿಕೊಂಡು ಹೋಗುವದು ಒಕ್ಕಲಿಗನ ಧರ್ಮ. ಈಗ ದೇವರು ನನಗೇನಾದರೂ ಹಾನಿಮಾಡಿಬಿಟ್ಟರೆ?" ಎಂದು ಯೋಚಿಸಿದ.

ಮಾರ್ಗಶಿರಮಾಸ. ಸುತ್ತಲೂ ಇಬ್ಬನ್ನಿ ಬಿದ್ದಿದ್ದಿತು. ನಾಲ್ಕೂ ಕಡೆಗೆ ಕತ್ತಲೆ ಆವರಿಸಿದ್ದಿತು. ಝಿಂಗುರ ಊರ ಹೊರಗೆ ಹೊರಟಾಗ ಅಕಸ್ಮಾತ್ತಾಗಿ ಉರಿ ಕಂಡಿತು! ಅದು ಕೂಡ ತನ್ನ ಕಬ್ಬಿನ ತೋಟದಲ್ಲಿ!! ಎದೆ ಢವಗುಟ್ಟತೊಡಗಿತು. ತೋಟಕ್ಕೆಯೇ ಬೆಂಕಿ ಹತ್ತಿದ್ದಿತು. ಅದು ತನ್ನ ತೋಟದಲ್ಲೇ ಇರಲಿಕ್ಕಿಲ್ಲವಷ್ಟೇ ಎನ್ನುತ್ತಲೇ ಓಡಿದನು. ಆದರೇನು ಎಲ್ಲವೂ ಅನರ್ಥ! "ಅಯ್ಯೋ" ಎಂದುಕೊಂಡ. ಆತ ಹೊಲ ಮುಟ್ಟಿದಾಗ ಬೆಂಕಿ ಪ್ರಚಂಡರೂಪ ತಾಳಿದ್ದಿತು. ಝಿಂಗುರ ಶಂಖವಾದ್ಯ ಪ್ರಾರಂಭಿಸಿದ. ಜನವೂ ಕೂಡಿತು. ಎಲ್ಲರೂ ಬೆಂಕಿ ಆರಿಸಲು ಪ್ರಯತ್ನಪಟ್ಟರು. ಸ್ವತಃ ಬುದ್ಧು ತಾನೂ ಬೆಂಕಿಯಲ್ಲಿ ಹೋಗಿ ಕೊಡಲಿ ಸಲಿಕೆಗಳನ್ನು ತರುತ್ತಿದ್ದ. ಹಾಗೆಯೇ ಉರಿ ಹಾಗುತ್ತ ಎಲ್ಲರ ತೋಟಗಳನ್ನು ಸುಟ್ಟಿತಲ್ಲದೆ ಝಿಂಗುರನ ಭಾವೀ ಹೊಂಗನಸನ್ನೂ ಬೂದಿ ಮಾಡಿತು.

೩

ಈ ಬೆಂಕಿ ಯಾರು ಹಚ್ಚಿದರೆಂಬುದು ಪ್ರಕಟವಾಗಲೇ ಇಲ್ಲ. ಜನರೆಲ್ಲ ಝಿಂಗುರನನ್ನೇ ಬೈಯುತ್ತಿದ್ದರು, "ನೀನೇ ಬೆಂಕೆ ಹಚ್ಚಿದೆ. ನೀನು ಬುದ್ಧೂ ನೊಡನೆ ಕಲಹವನ್ನೇಕೆ ತೆಗೆಯಬೇಕು? ಅದರಿಂದ ನೀನೂ ಮುಳುಗಿದೆ. ನಮ್ಮನ್ನೂ ಮುಳುಗಿಸಿದೆ." ಹೀಗಾಗಿ ಝಿಂಗುರನಿಗೆ ಮನೆಬಿಟ್ಟು ಹೊರಗೆ ಹೋಗುವದೂ ಕಠಿಣವಾಗಿ ತೋರಿತು. ತನಗೆ ಹಾನಿಯಾದುದು ಅಷ್ಟು ದುಃಖಕರವಾಗಿ ಅವನಿಗೆ ತೋರಲಿಲ್ಲ. ಆದರೆ ಜನರ ಮಾತುಗಳಿಂದ ಅವನ ದುಃಖ ಬೆಳೆಯಿತು.

ಪುಷ್ಯಮಾಸ ಬಂದಿತು. ನರಿಗಳ ಓಡಾಟವೂ ಬೆಳೆಯಿತು. ಬೆಲ್ಲದ ವಾಸನೆಯು ಹರಡಿತು. ಜನ ರಾತ್ರಿ ಬೆಂಕಿ ಹೊತ್ತಿಸಿ ಬೆಲ್ಲ ಮಾಡುತ್ತ ತಾವು ಕಾಸಿಕೊಳ್ಳುತ್ತ ಕುಳಿತುಕೊಳ್ಳುತ್ತಿದ್ದರು. ತೋಟ ಸುಟ್ಟವರು ಸಂಜೆಗೇ ಬಾಗಿಲು ಹಾಕಿಕೊಂಡು ಝಿಂಗುರನಿಗೆ ಬೈಯುತ್ತ ಬೆಚ್ಚಗೆ ಮಲಗುತ್ತಿದ್ದರು.

ಮಾಘ ಇದಕ್ಕೂ ಕಷ್ಟಮಯವಾಗಿದ್ದಿತು. ಕಬ್ಬು ಒಕ್ಕಲಿಗರಿಗೆ ಹಣ ವನ್ನು ಕೊಡುವದೆಂದಷ್ಟೇ ಅಲ್ಲ, ಜೀವನಕ್ಕೂ ಸಹಾಯಮಾಡುತ್ತದೆ. ಒಕ್ಕಲಿ ಗರು ರಾತ್ರಿ ಬಿಸಿ ರಸ ಕುಡಿಯುತ್ತಾರೆ. ಬೆಚ್ಚಗೆ ಮಲಗುತ್ತಾರೆ. ಕಬ್ಬಿನ ಸೋಗೆಗಳಿಂದ ದನಗಳಿಗೆ ಮೇವಾಗುತ್ತಿದ್ದಿತು. ಆದರೆ ಪೈರು ಸುಟ್ಟುಹೋದ ಮೂಲಕ ದನಗಳಿಗೆ ಮೇವು ಸಾಕಾಗಲಿಲ್ಲ. ಹೀಗಾಗಿ ಅವು ಒಂದೊಂದೇ ಸಾಯತೊಡಗಿದವು. ಜನರು ಎನ್ನುತ್ತಿದ್ದರು, "ಈ ಎಲ್ಲ ಅಪರಾಧಗಳ ಮೂಲ ಝಿಂಗುರ." ಕೊನೆಗೆ ಝಿಂಗುರ ಬೇಸತ್ತು ಬುದ್ಧುವನ್ನು ತನ್ನ ಸ್ಥಿತಿಗೆ ಇಳಿಸ ಬೇಕೆಂದು ಬಗೆದನು. "ತಾನೂ ಆತನ ಸರ್ವನಾಶ ಮಾಡಿದರಾಗದೆ?" ಎಂದುಕೊಂಡನು. ಈ ಘಾತುಕ ಕಲಹದ ಬೀಜಾರೋಪಣವು ಆದುದರಿಂದ ಬುದ್ಧು ಆ ಮಾರ್ಗದಿಂದ ಹೋಗುವದನ್ನು ಬಿಟ್ಟುಬಿಟ್ಟಿದ್ದ.

ಝಿಂಗುರ ಬುದ್ಧುವಿನೊಡನೆ ತೋರಿಕೆಯ ಸ್ನೇಹ ಬೆಳೆಸಲು ಮೊದಲು ಮಾಡಿದ. ಅಲ್ಲದೆ 'ಅವನ ಮೇಲೆ ಏನೂ ಸಂಶಯವಿಲ್ಲ' ವೆಂಬಂತೆ ನಟಿಸ ತೊಡಗಿದ. ಒಂದು ಸಲ ಕಂಬಳಿಯ ನೆವಮಾಡಿ ಹೋಗುತ್ತಿದ್ದ. ಇನ್ನೊಂದು ಸಲ ಹಾಲಿನ ನೆವಮಾಡಿ ಹೋಗುತ್ತಿದ್ದ. ಬುದ್ಧು ಕೂಡ ಅವನ ಆದರ

ಸತ್ಕಾರಮಾಡುತ್ತಿದ್ದ. ಇಬ್ಬರೂ ಕೂಡಿಯೇ ಗುಡುಗುಡಿ ಸೇದುತ್ತಿದ್ದರು. ಅಲ್ಲದೆ ಇಬ್ಬರೂ ಕೂಡಿಯೇ ಹಾಲು ಕುಡಿಯುತ್ತಿದ್ದರು. ಒಂದು ಸಲ ಬುದ್ಧು ಕೇಳಿದ, "ಝಿಂಗುರ, ನಿನ್ನ ಮನಸ್ಸಿನಲ್ಲಿರುವದನ್ನು ನಿಜವಾಗಿ ಹೇಳಬೇಕು. ನಿನ್ನ ಕಬ್ಬಿನ ತೋಟಕ್ಕೆ ಬೆಂಕಿ ಹಚ್ಚಿದವನು ಸಿಕ್ಕರೆ ನೀನು ಏನು ಮಾಡುವಿ?" "ನಾನು ಹೇಳುತ್ತಿದ್ದೆ, ನೀನು ನನ್ನ ಸೊಕ್ಕು ಮುರಿದು, ಮನುಷ್ಯನನ್ನಾಗಿ ಮಾಡಿದೆ, ಅದಕ್ಕಾಗಿ ಧನ್ಯವಾದಗಳು" ಎಂದು ಹೇಳಿದ ಝಿಂಗುರ.

"ನಾನು ನಿನ್ನ ಸ್ಥಳದಲ್ಲಿದ್ದರೆ ಅವನ ಮನೆಯನ್ನೇ ಸುಟ್ಟುಬಿಡುತ್ತಿದ್ದೆ." ಎಂದ ಬುದ್ಧು. "ಇಂದಿದ್ದು, ನಾಳೆ ಹೋಗುವವರು ನಾವು, ಸುಮ್ಮನೆ ಏಕೆ ವೈರ ಕಟ್ಟಿಕೊಳ್ಳಬೇಕು?" ಝಿಂಗುರ ಉತ್ತರವನ್ನಿತ್ತ.

ಇದು ಮನುಷ್ಯನ ಧರ್ಮ. ಆದರೆ ಮನುಷ್ಯ ಸಿಟ್ಟಿನ ಕೈಯಲ್ಲಿ ಬುದ್ಧಿ ಕೊಟ್ಟರೆ ಎಷ್ಟೊಂದು ಅನರ್ಥಗಳಾಗುತ್ತವೆ?"

## ೪

ಫಾಲ್ಗುಣಮಾಸವಿದ್ದಿತು. ಒಕ್ಕಲಿಗರು ಮತ್ತೆ ಕಬ್ಬು ಬಿತ್ತುವ ಸಿದ್ಧತೆಯಲ್ಲಿದ್ದರು. ಬುದ್ಧುವಿನ ವ್ಯಾಪಾರವೂ ಚೆನ್ನಾಗಿ ಸಾಗಿದ್ದಿತು. ಹೊಲದಲ್ಲಿ ಗೊಬ್ಬರಕ್ಕಾಗಿ ಕುರಿಗಳನ್ನು ತರುಬುವದರ ಧಾರಣೆಯು ಬೆಳೆಯತೊಡಗಿದ್ದಿತು. ಯಾರಾದರೂ ಅರೆದಾಡತೊಡಗಿದರೆ, "ನಾನೇನು ಒತ್ತಾಯದಿಂದ ನಿನ್ನ ಕೊರಳಲ್ಲಿ ಕುರಿ ಕಟ್ಟುವದಿಲ್ಲ. ಬೇಕಾದರೆ ತೆಗೆದುಕೋ. ನಾನು ಹೇಳಿದುದರಲ್ಲಿ, ಒಂದು ಕಾಸೂ ಕಡಿಮೆಯಾಗಲಾರದು" ಎಂದು ಬುದ್ಧು ಸ್ಪಷ್ಟವಾಗಿ ಹೇಳುತ್ತಿದ್ದ. ಬುದ್ಧುವಿನ ಮನೆ ಬೆಳೆಯತೊಡಗಿತು. ಕುರಿಗಳೂ ಬೆಳೆಯತೊಡಗಿದ್ದವು. ಎರಡು ಕೋಣೆಗಳಿದ್ದಲ್ಲಿ ಆರು ಕೋಣೆಗಳಾದವು. ಒಬ್ಬರಿಂದ ಕಟ್ಟಿಗೆ ಪಡೆದು, ಗುಡ್ಡಕ್ಕೆ ಹೋಗಿ ಕಲ್ಲು ಆರಿಸಿ ತಂದು ಬುದ್ಧು ಆವಾರ ಬೆಳೆಸಿದ. ಹೊಸ ಮನೆ ಕಟ್ಟಿಸಿದ ಗೃಹಪ್ರವೇಶದ ಉತ್ಸವದ ಸಿದ್ಧತೆಗಳೂ ಆದವು.

ಇತ್ತ ಝಿಂಗುರ ಹಗಲೆಲ್ಲ ದುಡಿದು ಅರಹೊಟ್ಟೆ ಉಂಡು ಜೀವಿಸುತ್ತಿದ್ದ. ಬುದ್ಧುವಿನ ಮನೆಯಲ್ಲಿ ಬಂಗಾರ ಸುರಿಯುತ್ತಿರುವದನ್ನು ಕಂಡು

ಝುಂಗುರ ಹೊಟ್ಟೆಕಿಚ್ಚುಪಡುತ್ತಿದ್ದರೆ ಏನಾಶ್ಚರ್ಯ? ಒಂದು ದಿನ ಆತ ತಿರು-
ಗಾಡುತ್ತಾ ಹೊಲಗೇರಿಗೆ ಹೋದ. ಅಲ್ಲಿ ಹರಿಹರನನ್ನು ಕೂಗಿದ. ಹರಿಹರ
ಬಂದು ವಂದನೆ ಮಾಡಿ ಬೀಡಿ ಸೇದಲು ಮೊದಲು ಮಾಡಿದ. ಹರಿಹರ ದುಷ್ಟ
ಮನುಷ್ಯನಾಗಿದ್ದ. ಆತನ ಹೆಸರು ಕೇಳಿಯೇ ಒಕ್ಕಲಿಗರು ನಡುಗುತ್ತಿದ್ದರು.

ಝುಂಗುರ ಹೇಳಿದ, "ಇತ್ತೀಚೆಗೆ ನಿನ್ನ ಕೆಲಸ ಚೆನ್ನಾಗಿ ನಡೆದಿದೆ
ಯಲ್ಲವೆ?"

"ಚೆನ್ನಾಗಿ ನಡೆದಿದೆಯಲ್ಲ. ತಮ್ಮದು?"

"ಏನು ಚೆನ್ನಾಗಿ ನಡೆದಿದೆಯೋ ದೇವರೇ ಬಲ್ಲ. ಒಂದು ದಿನ ಹೊಟ್ಟೆ
ತುಂಬ ಉಂಡರೆ ನಾಲ್ಕು ದಿನ ಉಪವಾಸ. ನಿಜವಾದ ಸಿರಿವಂತ ಬುದ್ಧು.
ಹೊಸ ಮನೆ ಕಟ್ಟಿಸಿದ. ಕುರಿ ಬೇರೆ ಕೊಂಡಿದ್ದಾನೆ."

"ಅಲ್ಪಸ್ವಲ್ಪ ದುಡ್ಡು ಬಂದರೆ ಕಣ್ಣು ನೆತ್ತಿಯ ಮೇಲೆ ಬಂದಿವೆ.
ದೇವರು ಕೊಟ್ಟರೆ ಇವರಿಗೆ ವಿನಯದಿಂದ ಇರಲಿಕ್ಕೆ ಬರುವದಿಲ್ಲವೆ? ಅವನ
ಡೌಲು ನೋಡಬೇಕು? ಮೊನ್ನೆಮೊನ್ನೆಯ ವರೆಗೆ ಬೀದಿಯ ಭಿಕಾರಿಯಾಗಿ
ದ್ದವನು ಈಗ ಸೆಟ್ಟಿಯಾಗಿದ್ದಾನೆ. ನಿನ್ನೆ ಲಂಗೋಟಿ ಹಾಕಿಕೊಂಡು ಕುರಿ
ಕಾಯುತ್ತಿದ್ದ; ಈಗ ಹೊಸಮನೆ ಕಟ್ಟಿಸಿದ್ದಾನೆ."

"ಅದಕ್ಕೆ ಏನು ಮಾಡೋಣ?"

"ಏನು ಮಾಡುವದು? ಆಕಳು ಎಮ್ಮೆಗಳೊಂದೂ ಇಲ್ಲವೇ ಇಲ್ಲ."

"ಕುರಿಗಳಿವೆಯಷ್ಟೆ?"

"ಅವುಗಳಿಂದೇನು ಪ್ರಯೋಜನ?"

"ಅಲ್ಲಿ ಎಮ್ಮೆ ಆಕಳುಗಳನ್ನು ನೀವೇ ಇಟ್ಟುಬಿಡಿರಿ."

ಇದಾದ ಬಳಿಕ ಅವರಿಬ್ಬರಲ್ಲಿ ಗುಸುಗುಸು ಮಾತುಗಳು ನಡೆದವು.
ಒಳ್ಳೆಯತನದಲ್ಲಿ ದ್ವೇಷವಿದ್ದಷ್ಟು ಕೆಟ್ಟತನದಲ್ಲಿ ಸ್ನೇಹವಿರುತ್ತದೆ. ಜಾಣನು
ಜಾಣನನ್ನು, ಸಾಧು ಸಾಧುವನ್ನು, ಕವಿಯು ಕವಿಯನ್ನು ನೋಡಿ ದ್ವೇಷಿಸು
ತ್ತಾನೆ. ಆದರೆ ಜೂಜುಖೋರನು ಜೂಜುಖೋರನೊಡನೆ, ಸೆರೆಗುಡುಕ
ಸೆರೆಗುಡುಕನೊಡನೆ ಕಳ್ಳನು ಕಳ್ಳನೊಡನೆ, ಯಾವಾಗಲೂ ಸ್ನೇಹದಿಂದ

ವರ್ತಿಸುತ್ತಾರೆ. ಒಬ್ಬ ಪಂಡಿತನು ಎಲ್ಲಿಯಾದರೂ ಎಡವಿಬಿದ್ದರೆ ಇನ್ನೊಬ್ಬನು ಆತನನ್ನು ಎಬ್ಬಿಸದೆ ಆತನು ಏಳದ ಹಾಗೆ ಒಂದೆರಡು ಸಲ ಒದ್ದು ಹೋಗುತ್ತಾನೆ. ಆದರೆ ಓಡುವಾಗ ಒಬ್ಬ ಹುಡುಗನು ಬಿದ್ದರೆ ಇನ್ನೊಬ್ಬ ಹುಡುಗ ಅವನನ್ನೆಬ್ಬಿಸಿ ಇಬ್ಬರೂ ಕೂಡಿಯೇ ಓಡುತ್ತಾರೆ. ಒಳ್ಳೆಯತನವನ್ನು ಜನರು ಪ್ರಶಂಸಿಸುತ್ತಾರೆ. ಆದಕ್ಕಾಗಿ ಒಳ್ಳೆಯತನಕ್ಕೆ ಇಷ್ಟು ದ್ವೇಷ; ಕೇಡುತನವನ್ನು ಜನರು ನಿಂದಿಸುತ್ತಾರೆ; ಆದಕ್ಕೆ ಕೇಡುತನಕ್ಕಾಗಿ ಇಷ್ಟು ಸ್ನೇಹ.

ಝಿಂಗುರ ಹರಿಹರನಿಗೆ ತನ್ನ ಯುಕ್ತಿ ಹೇಳಿದ. ಹರಿಹರನೂ ಒಪ್ಪಿದ.

## ೫

ಎರಡನೆಯ ದಿನ ಝಿಂಗುರ ಕೆಲಸಕ್ಕೆ ಹೋಗುವ ಮೊದಲು ಬುದ್ಧುವಿನ ಮನೆಗೆ ಬಂದ. ಬುದ್ಧು ಕೇಳಿದ, "ಕೆಲಸಕ್ಕೆ ಹೋಗಲಿಲ್ಲವೇನು?"

"ಹೊರಟಿದ್ದೇನೆ. ಆದರೆ ನನ್ನ ಮನೆಯಲ್ಲಿಯ ಆಕಳು ಕರುವನ್ನು ಮೇಯಿಸಿ ತರಲಾರೆಯಾ? ಮನೆಯಲ್ಲೇ ಇದ್ದು ಸಾಯತೊಡಗಿದೆ."

"ಎಮ್ಮೆ ಆಕಳು ಸಾಕಲಾರೆ. ಈ ಹರಿಹರ ನನ್ನ ಎರಡು ಹೋರಿ ಕರುಗಳನ್ನು ಕೊಂದ. ಆದಕ್ಕೆ ಎಮ್ಮೆ ಆಕಳುಗಳನ್ನು ಸಾಕಬಾರದೆಂದೇ ಮಾಡಿದ್ದೇನೆ. ಆದರೆ ನಿನ್ನದೊಂದೇ ಆಕಳುಕರು. ಬೇಕಾದಾಗ ಕಟ್ಟಿಹೋಗು."

ಇಷ್ಟು ಹೇಳಿ ಬುದ್ಧು ಗೃಹೋತ್ಸವದ ಸಿದ್ಧತೆಯನ್ನು ತೋರಿಸತೊಡಗಿದ. ತುಪ್ಪ, ಹಿಟ್ಟು, ಸಕ್ಕರೆ, ತರಕಾರಿ ಎಲ್ಲವೂ ಸಿದ್ಧವಾಗಿದ್ದವು. ಝಿಂಗುರವ ಕಣ್ಣು ಅರಳಿದವು. ಅವನು ಇಂತಹ ಸಿದ್ಧತೆಯನ್ನು ಎಂದೂ ಮಾಡಿರಲಿಲ್ಲ. ಮಾಡಿದುದನ್ನು ನೋಡಿಯೂ ಇರಲಿಲ್ಲ. ಕೂಲಿಮಾಡಿ ಮನೆಗೆ ಮರಳಿದೊಡನೆ ಝಿಂಗುರ ತನ್ನ ಕರುವನ್ನು ಬುದ್ಧುವಿನ ಮನೆಗೆ ತಲುಪಿಸಿದ.

ಅಂದು ರಾತ್ರಿ ಬುದ್ಧುವಿನ ಮನೆಯಲ್ಲಿ ಸತ್ಯನಾರಾಯಣವಾಯಿತು. ಬ್ರಾಹ್ಮಣರ ಭೋಜನವೂ ಆಯಿತು. ಆ ರಾತ್ರಿ ಬಾಹ್ಮಣರ ಜೊತೆಗೆ ಹರಟೆಯಲ್ಲಿಯೇ ಕಳೆದುಹೋಯಿತು. ಕೊನೆಗೆ ಮುಂಜಾವಿನಲ್ಲಿ ಬುದ್ಧುವು ಊಟ ಮಾಡಿ ಎದ್ದಾಗ ಒಬ್ಬ ಮನುಷ್ಯ ಬಂದು ಹೇಳಿದ, "ಅಲ್ಲಿ ಕುರಿಗಳ ಮಧ್ಯದಲ್ಲಿ

ಒಂದು ಆಕಳ ಕರು ಸತ್ತುಬಿದ್ದಿದೆ. ಒಳ್ಳೆಯ ಮನುಷ್ಯ! ಆದರ ವ್ಯವಸ್ಥೆ ಮಾಡಬಾರದೆ?"

ಬುದ್ಧುವಿನ ಎದೆ ಡವಗುಟ್ಟಿತು. ಅಲ್ಲಿಯೇ ಝುಂಗುರ ಊಟಮಾಡಿ ಕುಳಿತಿದ್ದ. "ಅಯ್ಯೋ, ನನ್ನ ಕರುವೇ! ನಡೆಯಿರಿ ನೋಡೋಣ. ನಾನು ಕರುವನ್ನು ನಿನ್ನೆ ರಾತ್ರಿ ತಂದು ಕಟ್ಟಿದ್ದೆ." ಎಂದ.

"ದೇವರಿಗೇ ಗೊತ್ತು. ನಾನು ಕುರಿಗಳ ಕಡೆಗೆ ಹೋಗಿಯೇ ಇಲ್ಲ" ಬುದ್ಧು ನುಡಿದ.

"ಹೋಗಿರಬಹುದು, ಮರೆತಿದ್ದೀರಿ" ಝುಂಗುರನೆಂದ.

"ನಾನು ನಿನ್ನೆ ಸಂಜೆ ತಾವು (ಬುದ್ಧು) ಆಕಳುಕರದ ಬಳಿಯಲ್ಲಿ ನಿಂತುದನ್ನು ನೋಡಿದ್ದೇನೆ." ಹರಿಹರನೆಂದ.

"ನಾನು ನಿಂತಿದ್ದೆನೆ?" ಬುದ್ಧು ಕೇಳಿದ.

"ತಾವು ಹೆಗಲ ಮೇಲೆ ಲಾಠಿಯನ್ನು ಇಟ್ಟುಕೊಂಡು ಕರುವಿನ ಬಳಿ ನಿಂತಿರಲಿಲ್ಲವೆ? "

"ನಾನು ಕರುವಿನ ಬಳಿ ನಿಂತುದನ್ನು ನೀನು ನೋಡಿಯಾದ್ದೆ?" ಬುದ್ಧು ಕೇಳಿದ.

"ಇದರ ನಿಶ್ಚಯ ಮಾಡಲೇಬೇಕು. ಚೇಷ್ಟೆಯಲ್ಲ, ಗೋಹತ್ಯೆಯ ಪ್ರಾಯಶ್ಚಿತ್ತ ಪಡೆಯಬೇಕಾದೀತು," ಅಲ್ಲಿಯೇ ಕುಳಿತ ಒಬ್ಬ ಹಾರುವ ನುಡಿದ.

"ತಿಳಿಯದೆ ಕೊಂದಿರಬಹುದು," ಝುಂಗುರನೆಂದ.

"ಇದರಿಂದೇನಾದೀತು? ಹತ್ಯೆ ಹೀಗೆಯೇ ಆಗುತ್ತದೆ ಯಾರೂ ಆಕಳನ್ನು ಬೇಕೆಂದು ಕೊಲ್ಲುವದಿಲ್ಲ." ಬ್ರಾಹ್ಮಣ ನುಡಿದ.

"ಹಾಗಾದರೆ ಆಕಳು ಕಟ್ಟದೆ ಇರುವುದೇ ಒಳ್ಳೆಯದಲ್ಲ!" ಝುಂಗುರ ಹೇಳಿದ.

"ಗೋಹತ್ಯೆ ಬ್ರಹ್ಮಹತ್ಯೆಗೆ ಸಮಾನ. ಶಾಸ್ತ್ರಗಳಲ್ಲಿ ಇದು ಮಹಾ ಪಾಪವೆಂದು ಹೇಳಿದೆ" ಬ್ರಾಹ್ಮಣ ನುಡಿದ.

'ಹೋಗಲಿ. ಆಕಳನ್ನಂತೂ ಕೊಂದುದಾಯಿತು. ಆದರೆ ಆ ಪಾಪ

ತೊಳೆದುಹೋಗಬೇಕಾದರೆ ಯಾವ ಪ್ರಾಯಶ್ಚಿತ್ತ ತೆಗೆದುಕೊಳ್ಳಬೇಕು?" ಝಿಂಗುರ ಕೇಳಿದ.

ಬುದ್ಧು ತನ್ನ ಮೇಲೆ ಬರುತ್ತಿರುವ ಈ ಅಪರಾಧವನ್ನು ಕೇಳುತ್ತ ಹಾಗೆಯೇ ನಿಂತಿದ್ದ. ಝಿಂಗುರನ ಕುಟಿಲ ನೀತಿಯೂ ತಿಳಿದಿದ್ದಿತು. ಆದರೆ ಏನು ಪ್ರಯೋಜನ?

ಬುದ್ಧುವಿನ ಪ್ರಾಯಶ್ಚಿತ್ತದಿಂದ ಬ್ರಾಹ್ಮಣರಿಗೆ ದೊಡ್ಡ ಲಾಭವಾಗುತ್ತಿದ್ದಿತು. ಅಂದಬಳಿಕ ಅವರಾದರೂ ಏಕೆ ಬಿಟ್ಟಾರು? ಪ್ರಾಯಶ್ಚಿತ್ತವನ್ನೂ ಹೇಳಿಕೊಟ್ಟರು, 'ಮೂರು ತಿಂಗಳು ತಾನೇ ಬಿಕ್ಷೆಯನ್ನೆತ್ತಿ ಉಣ್ಣುವುದು, ಏಳು ತೀರ್ಥಸ್ಥಳಗಳಿಗೆ ಹೋಗಿ ಬರುವುದು, ಹಾಗೂ ಐದುನೂರು ಬ್ರಾಹ್ಮಣರಿಗೆ ಭೋಜನಮಾಡಿಸಿ ಐದು ಆಕಳು ದಾನ ಮಾಡುವುದು.' ಮೇಲು ವಿಚಾರಣೆಯಂತೂ ಇರಲೇ ಇಲ್ಲ ದುರ್ದೈವಿಗೆ ಶಿಕ್ಷೆ ಭೋಗಿಸಲೇಬೇಕಾಯಿತು.

೭

ಬುದ್ಧು ದಿನಾಲು ಬಿಕ್ಷೆಯನ್ನೆತ್ತಲು ಹೋಗಲು ಪ್ರಾರಂಭಿಸಿದ. ಪ್ರತಿಯೊಂದು ಮನೆಯ ಮುಂದೆ ಹೋಗಿ "ಆಕಳ ಕರು ನನಗೆ ವನವಾಸಕೊಟ್ಟಿತು" ಎಂದು ಹೇಳುತ್ತಿದ್ದ. ಬಿಕ್ಷೆಯೇನೋ ಸುಲಭವಾಗಿ ಸಿಕ್ಕುತ್ತಿತ್ತು. ಆದರೆ ಭಿಕ್ಷದ ಜೊತೆಗೆ ನಾಲ್ಕಾರು ಕಟುವಾಕ್ಯಗಳೂ ಬರುತ್ತಿದ್ದವು. ದಿನವೆಲ್ಲ ಪಡೆದುದನ್ನು ಕೂಡಿಸಿ ಸಂಜೆಗೆ ಒಂದು ಮರದ ಅಡಿ ಅಡುತ್ತಿದ್ದ; ಉಂಡು ಅಲ್ಲಿಯೇ ಮಲಗುತ್ತಿದ್ದ. ಆದರೆ ತಿರುಪೆ ಬೇಡಲು ನಾಚಿಕೆಯಾಗುತ್ತಿದ್ದಿತು. ಯಾರಾದರೂ ಹಂಗಿಸಿದರೆ ಆತನಿಗೆ ನಿಜವಾಗಿ ಆ ವೇದನೆ ಎದೆ ನಡಗಿಸುತ್ತಿತ್ತು. ಆದರೆ ಮಾಡುವುದೇನು?

ಮೂರು ತಿಂಗಳು ಕಳೆದವು ಬುದ್ಧು ಮನೆಗೆ ಮರಳಿದ. ಇನ್ನೂ ತೀರ್ಥಯಾತ್ರೆಗೆ ಹೋಗಿ ಬರುವುದಿದ್ದಿತು. ಕುರುಬನಿಗೆ ಯಾರು ಸಾಲ ಕೊಟ್ಟಾರು? ಕುರಿಗಳನ್ನು ಅಡವಿಟ್ಟರೆ ಅವು ಸತ್ತುಹೋದರೆ? ಕೊನೆಗೆ ಒಬ್ಬ ಗಾಣಿಗ ರೂಪಾಯಿಗೆ ಎರಡಾಣೆ ಬಡ್ಡಿಯಂತೆ ಸಾಲಕೊಡಲು ಒಪ್ಪಿದ. ಆದರೆ ಸಾಲ ತೆಗೆದುಕೊಳ್ಳುವ ಧೈರ್ಯವಾಗಲಿಲ್ಲ.

ಇಷ್ಟು ಅವಧಿಯಲ್ಲಿ ಎಷ್ಟೋ ಕುರಿಗಳು ಕಳವಾಗಿಹೋಗಿದ್ದವು. ಹುಡುಗರು ಮೇಯಿಸಲು ತೆಗೆದುಕೊಂಡುಹೋದಾಗ ಬೇರೆ ಊರಿನವರು ಅವುಗಳನ್ನು ತೆಗೆದುಕೊಂಡುಹೋಗಿಬಿಡುತ್ತಿದ್ದರು. ಹುಡುಗರೇನು ಮಾಡಿಯಾರು? ಈಗ ಅವು ಮೊದಲಿನ ಅರ್ಧದಷ್ಟೂ ಉಳಿಯಲಿಲ್ಲ ಬುದ್ಧು ಅವೆಲ್ಲ ಕುರಿಗಳನ್ನು ಒಬ್ಬ ಕಟುಕರವನಿಗೆ ಐದುನೂರು ರೂಪಾಯಿಗಳಿಗೆ ಮಾರಿದ. ಅವುಗಳಲ್ಲಿ ಇನ್ನೂರು ತೆಗೆದುಕೊಂಡು ಯಾತ್ರೆಗೆ ಹೊರಟ. ಮಿಕ್ಕ ರೂಪಾಯಿಗಳು ಬ್ರಾಹ್ಮಣರ ಭೋಜನಕ್ಕೆ ವೆಚ್ಚವಾದವು ಬುದ್ಧು ಯಾತ್ರೆಗೆ ಹೋದಾಗ ಮನೆಗೆ ಎರಡು ಸಲ ಕನ್ನ ಹೊಡೆದರು. ಆದರೆ ಗಲಾಟೆಯಾದ ಮೂಲಕ ಹಣ ಅವರ ಕೈಗೆ ಸಿಕ್ಕಲಿಲ್ಲ

## ೭

ಶ್ರಾವಣಮಾಸ ನಾಲ್ಕೂಕಡೆಗೆ ಹಸಿರು ಹುಲ್ಲು ಬೆಳೆದಿದ್ದಿತು ಝಿಂಗುರನಿಗೆ ಎತ್ತುಗಳಿರಲಿಲ್ಲ. ಹೊಲ ಗೇಣಿಗೆ ಕೊಟ್ಟಿದ್ದ. ಬುದ್ಧು ತನ್ನ ಪ್ರಾಯಶ್ಚಿತ್ತ ಮುಗಿಸಿದ.

ಸಮೀಪದ ನಗರದಲ್ಲಿ ಒಂದು ದೊಡ್ಡ ಧರ್ಮಶಾಲೆಯನ್ನು ಕಟ್ಟುವ ಕೆಲಸ ನಡೆದಿತ್ತು. ಸಾವಿರಾರು ಕೂಲಿಗಳು ಕೆಲಸ ಮಾಡುತ್ತಿದ್ದರು. ಝಿಂಗುರ ಅವರಲ್ಲೊಬ್ಬನಾಗಿದ್ದ. ಏಳು ದಿನಗಳ ಕೂಲಿಯಲ್ಲಿ ತನಗೆ ಬೇಕಾದಷ್ಟನ್ನು ಇಟ್ಟುಕೊಂಡು ಉಳಿದುದನ್ನು ತನ್ನ ಮಡದಿಗೆ ತಂದುಕೊಡುತ್ತಿದ್ದ.

ಬುದ್ಧುವೂ ಇದರಲ್ಲಿ ಬಂದು ಸೇರಿದ. ಕಂಟ್ರಾಕ್ಟರ್ ನೋಡಿದ, ದುರ್ಬಲ ಬುದ್ಧುವನ್ನು; ಕಠಿಣ ಕೆಲಸ ಈತನಿಂದ ಸಾಧ್ಯವಿಲ್ಲವೆಂದು ಬಗೆದು ಗಾರೆ ತಂದು ಉಪ್ಪಾರರಿಗೆ ಕೊಡುವುದಕ್ಕೆ ನಿಯಮಿಸಿದ.

ಬುದ್ಧು ತಲೆಯ ಮೇಲೆ ಗಾರೆಯ ಬುಟ್ಟಿ ಇಟ್ಟುಕೊಂಡು ಹೊರಟುದನ್ನು ಝಿಂಗುರ ನೋಡಿ ನಮಸ್ಕರಿಸಿದ. ದಿನವೆಲ್ಲ ಇಬ್ಬರೂ ಕೂಡಿ ದುಡಿದರು.

“ಏನಾದರೂ ಕುಚ್ಚುವೆಯಲ್ಲವೇ?” ಝಿಂಗುರ ಕೇಳಿದ.

"ಏನಾದರೂ ಕುಚ್ಚಲೇಬೇಕಲ್ಲ!" ಬುದ್ಧು ಹೇಳಿದ.

"ನಾನು ಒಂದು ಸಲ ಕಡಲೆ ಹುರಿದುಕೊಳ್ಳುತ್ತೇನೆ. ಬಳಿಕ ಅದರಿಂದ ತಂಬಿಟ್ಟುಮಾಡೋಣ. ನೀನು ಬೆಂಕೀ ಮಾಡು." ಝಿಂಗುರ ಹೇಳಿದ.

"ಇಲ್ಲಿ ಅಲ್ಲಿ ಕಟ್ಟಿಗೆ ಬಿದ್ದಿವೆ, ಆರಿಸು. ನಾನು ಮನೆಯಿಂದ ಹಿಟ್ಟು ತಂದಿದ್ದೇನೆ. ನೀನು ರೊಟ್ಟಿ ಮಾಡು." ಬುದ್ಧು ಹೇಳಿದ.

"ಬೇಳೆಯಿದೆಯಲ್ಲವೇ?" ಝಿಂಗುರ ಕೇಳಿದ.

"ಓಹೋ, ಬೇಕಾದಷ್ಟು ತಂದಿದ್ದೇನೆ. ಬೇಳೆ ಮಾಡೋಣವಂತೆ" ಬುದ್ಧು ಹೇಳಿದ.

ಇಬ್ಬರೂ ಕೂಡಿ ಬೆಂಕಿ ಹೊತ್ತಿಸಿದರು. ಝಿಂಗುರ ಹಸಿಬಿಸಿ ರೊಟ್ಟಿ ಮಾಡಿದ. ಬುದ್ಧು ನೀರು ತಂದ. ಇಬ್ಬರೂ ರೊಟ್ಟಿಯನ್ನು, ಕಾರದೊಡನೆ ತಿಂದರು. ಕೊನೆಗೆ ಇಬ್ಬರೂ ಬೀಡಿ ಸೇದತೊಡಗಿದರು. ಬುದ್ಧು ಹೇಳಿದ, "ನಿನ್ನ ಕಬ್ಬಿನ ತೋಟಕ್ಕೆ ನಾನೇ ಬೆಂಕಿ ಹಚ್ಚಿದ್ದೆ."

ವಿನೋದಪೂರ್ವಕವಾಗಿ ಝಿಂಗುರ ಹೇಳಿದ, "ಗೊತ್ತಿದೆ. ನಾನು ಆ ಕಳುಕರ ಕಟ್ಟಿದ್ದೆ. ಹರಿಹರ ಅದನ್ನು ಕಡಿದುಹಾಕಿದ."

"ನನಗೂ ಗೊತ್ತಿದೆ" ಬುದ್ಧು ಹೇಳಿದ

ಇಬ್ಬರೂ ಒಂದೇ ಕಲ್ಲಿನ ಮೇಲೆ ತಲೆಯಿಟ್ಟು ಮಲಗಿದರು.

---

# ಶಾಂತಿ

## ೧

ನಾನು ನನ್ನ ಅತ್ತೆಯ ಮನೆಗೆ ಬಂದಾಗ ಇನ್ನೂ ಅಶಿಕ್ಷಿತಳಿದ್ದೆ. ತಲೆಯೆತ್ತಿ ಒಬ್ಬರೊಡನೆಯೂ ಮಾತನಾಡಿದವಳಲ್ಲ; ಅಷ್ಟೊಂದು ನಾಚಿಕೆ ನನ್ನನ್ನು ಆವರಿಸಿದ್ದಿತು. ನಾನು ಅಲ್ಪಸ್ವಲ್ಪ ಹಿಂದೀ ಕಲಿತಿದ್ದೆ. ಆದರೆ ಕಾದಂಬರಿ ನಾಟಕ ಓದುವುದರಲ್ಲಿ ಅಭಿರುಚಿಯಿರಲಿಲ್ಲ ಹೊತ್ತು ಸಿಕ್ಕಾಗ ರಾಮಾಯಣ ಓದುತ್ತಿದ್ದೆ. ಅದು ನನಗೆ ಬಲು ಮೆಚ್ಚಿನ ಗ್ರಂಥವಾಗಿದ್ದಿತು. 'ಅದು ಮನುಷ್ಯನಿಂದ ಬರೆಯಲ್ಪಟ್ಟುದಲ್ಲ, ದೇವನಿರ್ಮಿತವಾದುದು,' ಎಂದೇ ಭಾವಿಸುತ್ತಿದ್ದೆ. ಆಗ ಮನುಷ್ಯ ಅಷ್ಟೊಂದು ಸುಹೃದಯಿ ಎಂದು ನಾನು ಭಾವಿಸಿರಲಿಲ್ಲ ಹೊಸದಾಗಿ ಬಂದವಳಾದುದರಿಂದ ಅಷ್ಟೊಂದು ಕೆಲಸಗಳೂ ಬೀಳುತ್ತಿರಲಿಲ್ಲ. ಕೆಲಸವಿಲ್ಲದ ವೇಳೆಯಲ್ಲಿ ರಾಮಾಯಣವನ್ನು ಓದುತ್ತಿದ್ದೆನಲ್ಲದೆ ನೂಲು ತೆಗೆಯುತ್ತಿದ್ದೆ. ನನ್ನ ಅತ್ತೆ ನಿಜವಾಗಿ ಅತ್ತೆಯುವರೇ ಆಗಿದ್ದರು.

ಒಂದು ಸಲ ಬೇಳೆಯಲ್ಲಿ ಉಪ್ಪು ಹೆಚ್ಚಾಯಿತು. "ಉಪ್ಪು ಸ್ವಲ್ಪ ಕೈಹಿಡಿದು ಹಾಕು." ಎಂದಿಷ್ಟೇ ಮಾವನವರು ಹೇಳಿದರು. ಅಷ್ಟರಿಂದಲೇ ನನ್ನ ಎದೆ ನಡುಗಿಹೋಯಿತು. ಏಕೆಂದರೆ ಅದು ನನ್ನ ಪ್ರಥಮ ಪ್ರಯತ್ನ.

ನಾನು ಅಶಿಕ್ಷಿತಳಾಗಿರುವುದು ನನ್ನ ಪತಿಗೆ ಸೇರುತ್ತಿರಲಿಲ್ಲ. ಅವರು ವಕೀಲರು. ಮೇಲಾಗಿ ದೊಡ್ಡ ದೊಡ್ಡ ಡಿಗ್ರಿಗಳನ್ನು ಪಡೆದವರು. ನನ್ನಲ್ಲಿ ಅವರು ತೋರುತ್ತಿದ್ದುದು ದಯಾಪೂರ್ಣವಾದ ಪ್ರೇಮ. ಸ್ತ್ರೀಯರ ಜೀವನ, ಶಿಕ್ಷಣಗಳ ಬಗ್ಗೆ ಅವರಲ್ಲಿ ಉದಾರ ಭಾವನೆಗಳಿದ್ದವು. ಅಂತಹ ಉದಾರ-ಭಾವನೆಗಳನ್ನು ಭಾವಿಸಿ, ನನ್ನಂತಹ ಕೈಹಿಡಿದವಳನ್ನು ನೋಡಿ ಅವರು ಪ್ರಾಯಶಃ ಖಿನ್ನರಾಗುತ್ತಿದ್ದರು. ಆದರೆ ಇದು ನನ್ನ ತಪ್ಪಲ್ಲ. ಪುರಾತನ ಸಂಸ್ಕೃತಿಯ ಪ್ರತಾಪವೆಂದು ಭಾವಿಸಿ ಮತ್ತೆ ಸಂತೋಷಗೊಳ್ಳುತ್ತಿದ್ದರು.

ನನ್ನೊಡನೆ ಕುಳಿತು ಹರಟೆಹೊಡೆಯುವುದರಲ್ಲಿ ಅವರಿಗೆ ಸ್ವಲ್ಪವೂ ಆನಂದ ವಿರಲಿಲ್ಲ. ಮಲಗಲು ಬರುವಾಗ ಯಾವುದಾದರೂ ಇಂಗ್ಲೀಷು ಪುಸ್ತಕ ಜೊತೆಗೆ ತರುತ್ತಿದ್ದರು. ಹಾಗೂ ನಿದ್ದೆ ಬರುವ ವರೆಗೆ ಅದನ್ನು ಓದುತ್ತಿದ್ದರು. ನಾನು, "ಏನು ಓದುತ್ತಿದ್ದೀರಿ?" ಎಂದು ಕೇಳಿದರೆ, "ಅದು ನಿನಗೇನು ತಿಳಿಯಬೇಕು? ಇದು ಆಸ್ಕರವಾಯಿಲ್ಡ್‌ನ ಸರ್ವಶ್ರೇಷ್ಠ ಕೃತಿ," ಎಂದು ಹೇಳುತ್ತಿದ್ದರು. ನಾನು ನನ್ನ ಅಯೋಗ್ಯತೆಯನ್ನು ಕಂಡು ಬಹಳ ಲಜ್ಜಿತ ಳಾಗುತ್ತಿದ್ದೆ. 'ನಾನಿಂತಹ ವಿದ್ವಾಂಸರಿಗೆ ಯೋಗ್ಯಳಾದ ಮಡದಿಯಲ್ಲ. ಯಾವ ನಾದರೂ ಹುಚ್ಚನೊಬ್ಬನ ಕೈಹಿಡಿಯಲು ಯೋಗ್ಯಳು,' ಎಂದು ನನ್ನನ್ನು ನಾನೇ ಧಿಕ್ಕರಿಸಿಕೊಳ್ಳುತ್ತಿದ್ದೆ. ನನ್ನ ಪತಿ ನನ್ನನ್ನು ಅನಾದರ ದೃಷ್ಟಿಯಿಂದ ನೋಡುತ್ತಿದ್ದುದು ನನ್ನ ಪೂರ್ವ ಜನ್ಮದ ಪುಣ್ಯ.

ಒಂದು ಸಂಜೆ ರಾಮಾಯಣ ಓದುತ್ತಿದ್ದೆ. ಭರತ ರಾಮನನ್ನು ಹುಡು ಕಲು ಹೊರಟ ಕತೆ. ಅವನ ಕರುಣ ವಿಲಾಪ ಓದಿ ನನಗೂ ಕಣ್ಣಲ್ಲಿ ನೀರೂ ರಿತು. ಅಷ್ಟರಲ್ಲಿ ನನ್ನ ಪತಿ ನಾನಿದ್ದ ಕೋಣೆಯೊಳಗೆ ಬಂದರು ನಾನು ಪುಸ್ತಕ ಮುಚ್ಚಿದೆ. ಏಕೆಂದರೆ ಹಾಗೆ ತೋರವುದು ಮೂರ್ಖತನವೆಂದು ನಾನು ಭಾವಿಸಿದ್ದೆ. ಅವರು ನನ್ನ ಪುಸ್ತಕ ನೋಡಿ ಕೇಳಿದರು, "ರಾಮಾಯಣ ವಲ್ಲವೇ?" ನಾನು ಅಪರಾಧಿನಿಯಂತೆ ತಲೆ ತಗ್ಗಿಸಿ ಹೇಳಿದೆ. "ಹೌದು. ಸ್ವಲ್ಪ ನೋಡುತ್ತಿದ್ದೆ." "ಈ ಪುಸ್ತಕ ಒಳ್ಳೆಯದೆನ್ನುವುದರಲ್ಲಿ ಸಂದೇಹವಿಲ್ಲ ಆದರೆ ಇದರಲ್ಲಿ, ಇಂಗ್ಲೀಸು ಬರೆಹಗಾರರು ಚಿತ್ರಿಸುವಂತೆ ಮಾನವ ಜೀವನದ ಚಿತ್ರ ಅಷ್ಟೊಂದು ಹೃದಯಂಗಮವಾಗಿ ಚಿತ್ರಿತವಾಗಿಲ್ಲ. ಇದೀಗ ಯುರೋಪ ದಲ್ಲಿ 'ವಾಸ್ತವಿಕತೆ' (Realism)ಯ ಕಾಲ ಅಲ್ಲಿಯ ಬರೆಹಗಾರರು ಮನೋಭಾವನೆಗಳ ಉನ್ನತಿ ಹಾಗೂ ಪತನದ ವರ್ಣನೆಗಳನ್ನು, ಅಚ್ಚರಿಯಾಗು ವಷ್ಟು ಚೆನ್ನಾಗಿ ವರ್ಣಿಸುತ್ತಾರೆ. ನಮ್ಮಲ್ಲಿಯ ಕವಿಗಳು ಹೆಜ್ಜೆಹೆಜ್ಜೆಗೆ ಧರ್ಮನೀತಿಗಳನ್ನು ಸ್ಮರಿಸುತ್ತಾರೆ. ಆದುದರಿಂದ ಅವರ ಭಾವಗಳಲ್ಲಿ ಅಸ್ವಾಭಾವಿಕತೆ ಹೆಚ್ಚಾಗಿ ಕಂಡುಬರುತ್ತದೆ. ಇದೇ ಪದ್ಧತಿ ತುಲಸೀದಾಸ ದಲ್ಲಿಯೂ ಇದೆ" ಎಂದು ಹೇಳಿದರು.

ನನ್ನ ಮುಂದೆ ಅವರು ಹೇಳುವುದೆಲ್ಲವೂ "ಕೋಣನ ಮುಂದೆ........" ಎಂಬಂತಾಯಿತು. ಆದರೂ ಹೇಳಿದೆ, "ನನಗಂತೂ ಈ ಪುಸ್ತಕವನ್ನುಳಿದು ಗತ್ಯಂತರವಿಲ್ಲ. ಇಂಗ್ಲೀಷು ಪುಸ್ತಕ ಓದಲು ಬರುವುದೇ ಇಲ್ಲವಲ್ಲ?"

“ ಇಂಗ್ಲೀಷು ಅಷ್ಟೇನೂ ಕಠಿಣವಾದುದಲ್ಲ ದಿನಾಲು ಒಂದು ಗಂಟೆ ಓದಿದರೆ ಸಾಕು. ಕೆಲವೇ ದಿನಗಳಲ್ಲಿ ಕಲಿತುಬಿಡಬಹುದು ಆದರೆ ನೀನು ನನ್ನ ಮಾತನ್ನೇ ಕೇಳುವುದಿಲ್ಲವೆಂದು ಪಣವನ್ನು ತೊಟ್ಟಿದ್ದೀಯಲ್ಲ. ನನ್ನೊಡನೆ ಏತಕ್ಕೆ ನಾಚುಗೆ? ಎಂದು ಸಾವಿರಸಲ ತಿಳಿಸಿಹೇಳಿದೆ ಆದರೆ ಕೇಳುವುದೇ ಇಲ್ಲ ಸ್ವಚ್ಛತೆಯಿಂದ ಇರು ಎಂದು ಎಷ್ಟು ಹೇಳುತ್ತಿದ್ದೇನೆ! ದೇವರು ಸೌಂದರ್ಯವನ್ನು ಕೊಟ್ಟಿದ್ದಾನೆಂದು ಸಿಂಗರಿಸಿಕೊಳ್ಳುವುದನ್ನೂ ಅವನೇ ಕಲಿಸಬೇಕೇ? ನನ್ನಂತಹ ಕುರೂಪಿಯೊಬ್ಬನಿಗೆ ನೀನು ಹೇಗಿದ್ದರೂ ಅಷ್ಟೇ. ನೀನು ನಿಜವಾಗಿ ನನಗೆ ವೈರಾಗ್ಯ ಕಲಿಸುತ್ತಿರುವಂತೆ ತೋರುತ್ತದೆ. ನಾನು ಹಗಲಿರುಳು ದುಡಿಯುತ್ತಿದ್ದೇನೆ ಅಂದ ಮೇಲೆ, ‘ನನ್ನ ಗಳಿಕೆ ಉತ್ತಮ ರೀತಿಯಿಂದ ವ್ಯಯಿಸಲ್ಪಡಬೇಕು,’ ಎಂಬ ಬಯಕೆ ಸಾಮಾನ್ಯ. ಆದರೆ ಈ ನಿನ್ನ ಅಶಿಕ್ಷಿತತೆ ನನ್ನ ಬಯಕೆಯನ್ನು ಮಣ್ಣುಗೂಡಿಸುತ್ತದೆ ಅಡುವುದು, ಮಕ್ಕಳ ಪಾಲನೆಮಾಡುವುದು, ಪತಿಯ ಸೇವೆ ಮಾಡಿಕೊಂಡಿರುವುದು ಮಾತ್ರ ಸ್ತ್ರೀಯ ಧರ್ಮವಲ್ಲ ಅವರು ಮನುಷ್ಯರ ಸಮಸ್ತ ಸಾಮಾಜಿಕ ಹಾಗೂ ಮಾನಸಿಕ ವಿಷಯದಲ್ಲಿ ಭಾಗ ತೆಗೆದುಕೊಳ್ಳಲು ಅರ್ಹರು. ನಿನ್ನ ಕೈದಿ-ಯಂತಹ ಜೀವನವನ್ನು ನೋಡಿ ಹೇಸಿಕೆ ಬರುತ್ತದೆ. ಹೆಂಗುಸು ಗಂಡಸಿನ ಅರ್ಧಾಂಗಿ. ಆದರೆ ನೀನು ಮಾತ್ರ ನನ್ನ ಯಾವ ಕೊರತೆಯನ್ನೂ ಪೂರೈಸಿಲ್ಲ. ನನ್ನ, ನಿನ್ನ ಆಚಾರ ವಿಚಾರಗಳೇ ಬೇರೆ. ಅಂದ ಬಳಿಕ ಇಂತಹ ಸ್ಥಿತಿಯಲ್ಲಿ ನನ್ನ ಮನಸ್ಸಿನ ಸ್ಥಿತಿಯೇನೆಂಬುದನ್ನು ಗುರುತಿಸಬಲ್ಲೆಯಾ?”

ನನ್ನ ಪತಿಯ ಹೇಳಿಕೆ ಯಥಾರ್ಥವಾಗಿದ್ದಿತು. ಅಂದಿನಿಂದ ನಾನು ಅವರ ಹೇಳಿಕೆಯ ಮೇರೆಗೆ ನಡೆಯಲು ಸಿದ್ಧಳಾದೆ.

## ೨

ಇತರ ಸ್ತ್ರೀಯರಿಗಿರುವಷ್ಟು ಬಟ್ಟೆಗಳ ಮೇಲಣ ಮಮತೆ ನನ್ನಲ್ಲಿಯೂ ಇದ್ದಿತು. ಬಾಲ್ಯದಲ್ಲಿ ನನ್ನ ತಾಯಿ, ಅಜ್ಜಿ ತಾವೇ ನೂತು ನೇಯುತ್ತಿದ್ದರು. ಹೀಗಾಗಿ ಅರಿವೆ ಕೊಳ್ಳುವ ಬಳಕೆಯೇ ಇರಲಿಲ್ಲ. ನಾನೆಂದಾದರೂ ಹೊಸ ಪದ್ಧತಿಯ ಬಟ್ಟೆಗಳಿಗೋಸುಗ ಹಟ ಮಾಡಿದರೆ, “ ಆದನ್ನು ನಿನ್ನಂತಹರು

ಉಟ್ಟುಕೊಳ್ಳಬಾರದು. ಅದು ಪಾಶ್ಚಿಮಾತ್ಯರ ಉಡುಪು," ಎಂದು ಹೇಳಿ ಸುಮ್ಮನಿರಿಸುತ್ತಿದ್ದರು.

ಆದರೆ ನನ್ನ ಪತಿಯ ಆಜ್ಞೆಯ ಮೇರೆಗೆ ನನಗೆ ಅವನ್ನು ಉಟ್ಟು-ಕೊಳ್ಳಲೇಬೇಕಾಯಿತು. ಇದಕ್ಕಾಗಿ ನನ್ನ ಅತ್ತೆಯವರು ನನಗೆ ಬೈಯುತ್ತಿ-ದ್ದರೂ ನಾನು ಸಹಿಸಿಕೊಳ್ಳುತ್ತಿದ್ದೆ. ಇದರಿಂದ ನನ್ನ ಪತಿಯ ಸಂತೋಷ-ಪೂರಿತ ದೃಷ್ಟಿ ನನ್ನ ಮೇಲೆ ಬೀಳತೊಡಗಿತು. ಅವರು ನನಗೋಸುಗ ಫ್ಯಾಶನೇಬಲ್ ಸೀರೆ, ಜಾಕೀಟುಗಳನ್ನು ತರುತ್ತಿದ್ದರು. ನಾನು ಅವುಗಳನ್ನು ಅವರ ಮುಂದಿಷ್ಟೇ ಧರಿಸುತ್ತಿದ್ದೆ. ಇದನ್ನು ನೋಡಿ ಆವರು ಪ್ರಸನ್ನವದನ ರಾಗುತ್ತಿದ್ದರು. ಯಾವ ಹೆಂಗುಸು ತನ್ನ ಗಂಡನನ್ನು ಪ್ರಸನ್ನಗೊಳಿಸಲು ಯತ್ನಿಸುವುದಿಲ್ಲ? ಬಳಿಕ ನನ್ನ ಸಮಯದಲ್ಲಿಯ ಹೆಚ್ಚು ಭಾಗ ಸಿಂಗಾರ ದಲ್ಲಿಯೇ ವ್ಯಯವಾಗತೊಡಗಿತು.

ನನಗೆ ನನ್ನ ಮಾವನವರ ಬಗ್ಗೆ ಪೂಜ್ಯಭಾವನೆ ಇದ್ದಿಲ್ಲವೆಂತಲ್ಲ; ಅದಕ್ಕೇ ನಾನು ನನ್ನ ಈ ನವೀನ ಉಡುಪನ್ನು ಅವರ ಮುಂದೆ ಧರಿಸುತ್ತಿರ-ಲಿಲ್ಲ. ಒಮ್ಮೊಮ್ಮೆ, "ನನ್ನ ಪತಿ ನೂರಾರು ರೂಪಾಯಿ ಗಳಿಸುತ್ತಾರೆ. ಅಂದ-ಮೇಲೆ ನಾನು ಹೀಗೆ ಮಾಡಿದರೆ ತಪ್ಪೇನು? ನಾನು ನನ್ನ ಇಚ್ಛೆಗೆ ಬಂದಂತೆ ಮಾಡಬಲ್ಲೆ. ಇವರಾರು ನನಗೆ ಆಜ್ಞೆ ಮಾಡುವವರು?" ಎಂಬ ಯೋಚನೆ ಬರುತ್ತಿದ್ದಿತು. ಇದರಿಂದ ನನ್ನಲ್ಲಿ ಆತ್ಮಾಭಿಮಾನ ಬೆಳೆಯತೊಡಗಿತು.

ನನ್ನ ಅತ್ತೆಯವರು ನನಗೆ ಹೇಳಿದ ಕೆಲಸವನ್ನು ಸಾಧ್ಯವಿದ್ದಷ್ಟು ತಪ್ಪಿಸುತ್ತಿದ್ದೆ. ಒಮ್ಮೆ ಆವರು ಹೇಳಿದರು, "ಮುಂಜಾವಿನ ಫಲಾಹಾರಕ್ಕಾಗಿ ಸ್ವಲ್ಪ ಅವಲಕ್ಕಿ ಹಚ್ಚು." ನಾನು ಓಡಿ ಹೋಗಿ ನನ್ನ ಕೋಣೆಯಲ್ಲಿ ಕುಳಿತು-ಬಿಟ್ಟೆ. ಅವರಿಗೆ ಬಹಳ ಸಿಟ್ಟು ಬಂತು. ಅವರು ಸಿಟ್ಟಿನ ಸ್ವಭಾವದವರು. ಅವರು ನನ್ನನ್ನು ಒಬ್ಬ ದಾಸಿಯೆಂದೇ ಭಾವಿಸಿದ್ದರು. ಕೂಡಲೆ ಅವರು ನನ್ನ ಕೋಣೆಗೆ ಬಂದು ಕೇಳಿದರು, "ಅವಲಕ್ಕಿ ಹಚ್ಚಿ ಆಯಿತೇ?" ನಾನು "ಬಿಡುವು ಸಿಕ್ಕಲಿಲ್ಲ," ಎಂದು ಹೇಳಿಬಿಟ್ಟೆ. "ಹಾಗಾದರೆ ವೇಷಭೂಷಣಗಳಲ್ಲಿ ತೊಡಗಿ ಕೊಂಡಿರುವುದೇ ಒಂದು ದೊಡ್ಡ ಕೆಲಸವೇನು? ಏನು ಸೊಕ್ಕು? 'ನನ್ನ ಗಂಡ ಗಳಿಸುತ್ತಾನೆ. ನಾನೇಕೆ ಕೆಲಸ ಮಾಡಬೇಕು?' ಎಂದುಕೊಳ್ಳುತ್ತೀಯೇನು?

ಈ ಮದಾಂಧತನವು ಸರಿಯಾದುದಲ್ಲ. ಈಗ ಅವನು ನಾಲ್ಕುದುಡ್ಡು ಗಳಿಸ ಹತ್ತಿದ್ದಾನೆಂದು ಮನೆಯ ಯಜಮಾನಿತಿ ಆಗಬಯಸುವಿಯೇನು? ಅವನ ಪಾಲನೆ ಪೋಷಣೆಗೆ ನೀನು ಮೊದಲಿನಿಂದಲೂ ಬಂದಿರಲಿಲ್ಲ. ನಿನ್ನೆ ಬಂದಿದ್ದಾಳೆ, ತೋರಿಸುತ್ತಾಳೆ ಮತ್ತೆ ನನ್ನ ಮೇಲೆ ಅಧಿಕಾರ," ಎಂದರು ಅತ್ತೆಯವರು.

ನಾನು ಅಳತೊಡಗಿದೆ. ಬಾಯಿಯಿಂದ ಒಂದು ಶಬ್ದವೂ ಬರಲಿಲ್ಲ. ಆಗ ನನ್ನ ಪತಿ ಅಟ್ಟದ ಮೇಲೆ ಕುಳಿತು ಓದುತ್ತಿದ್ದರು ಈ ಹೇಳಿಕೆ ಅವರ ಕಿವಿಗೆ ಬಿತ್ತು. ಆ ರಾತ್ರಿ ಕೋಣೆಗೆ ಬಂದಾಗ ಹೇಳಿದರು, "ಈಹೊತ್ತು ತಾಯಿಯನ್ನೇಕೆ ಸಿಟ್ಟಿಗೆಬ್ಬಿಸಿದ್ದೆ? ಇದು ಅತ್ಯಾಚಾರ. ಇದರಿಂದ ನನ್ನ ಹೃದಯದಲ್ಲಿ ಎಷ್ಟು ವೇದನೆಯಾಗುತ್ತಿದೆಯೆಂದು ನೀನು ಅರಿಯಲಾರೆ ಗಾಳಿ, ಬೆಳಕು ನೀರು ಇಲ್ಲದೆ ಗಿಡ ಒಣಗಿಹೋಗುವ ಹಾಗೆ ನನ್ನ ಸಂಸಾರದ ಸ್ಥಿತಿಯಾದೀತು. ನಾನು ಅವರ ಮಗ. ಅಂದ ಮೇಲೆ ನನ್ನ ಮೇಲೆ ಅವರ ಸಂಪೂರ್ಣ ಹಕ್ಕು. ಅವರು ಹೇಳಿದಂತೆ ನಾನು ಕೇಳಬೇಕು; ಹಾಗೂ ಇದೇ ಬಂಧನ ಇನ್ನು ನಿನಗೂ. ಅದಕ್ಕಾಗಿ ಬೇರೆ ಯಾವುದಾದರೂ ದಾರಿ ಹುಡುಕು. ಅಮ್ಮನ ಕ್ರೋಧಸ್ವಭಾವದಲ್ಲಿ ಬದಲಾವಣೆಯಾಗದು. ನಿನಗೇನೆನಿಸುತ್ತದೆ?"

"ನೀವೇ ನಿಮಗೆ ಬೇಕಾದುದನ್ನು ಹೇಳಿ ನಾನು ಸದಾ ಸಿದ್ಧಳು ಇನ್ನು ಓದು ಬರೆಹ ಬಿಟ್ಟು ಮನೆಗೆಲಸ ಮಾಡು ಎಂದು ಹೇಳಿದರೆ ಅದಕ್ಕೂ ಗಟ್ಟಿ. ನನಗೆ ಓದಿ ಬರೆದು ಆಗಬೇಕಾದುದೇನು?" ಎಂದು ಅಂಜುತ್ತ ಅಂಜುತ್ತ ನುಡಿದೆ.

"ಆದರೆ ನನಗೆ ಇದು ಬೇಡ. ಇಂತಹ ಸಿಟ್ಟು ದಿನಾಲು ಬೆಳೆದೀತು. ನಾನು ನಿನ್ನನ್ನು ಹೆಚ್ಚು ಹೆಚ್ಚು ವಿಚಾರಶೀಲ, ಸಭ್ಯ ಮಾಡಲು ಪ್ರಯತ್ನಿಸಿದಷ್ಟು, ಹೆಚ್ಚು ಅವರ ಸಿಟ್ಟು ಬೆಳೆದೀತು. ವಿಚಾರ-ಸ್ವಾತಂತ್ರ್ಯ ಹಾಗೂ ಸಮಯಾನುಕೂಲತೆ ಅವರ ದೃಷ್ಟಿಯಿಂದ ಅಧರ್ಮ. ಯಾವುದಾದರೂ ಬೇರೆ ಊರಿಗೆ ಹೋಗಿ ಅಲ್ಲಿ ಸುಖವಾಗಿ ಇರೋಣ," ಅವರು ಹೇಳಿದರು.

ನಾನು ಈ ಕಾರ್ಯಕ್ಕೆ ನನ್ನ ವಿರೋಧ ತೋರಿಸಲಿಲ್ಲ. ನನಗೆ ಒಂಟಿಯಾಗಿರುವುದಕ್ಕೆ ಭಯವಿದ್ದರೂ ಭಾವೀ ಸ್ವತಂತ್ರತೆ ನನ್ನನ್ನು ಮರುಳುಗೊಳಿಸಿತು

೩

ಅಂದಿನಿಂದ ಅತ್ತೆಯವರು ನನ್ನೊಡನೆ ಮಾತನಾಡುವುದನ್ನು ಬಿಟ್ಟು ಬಿಟ್ಟರು. ಅಲ್ಲದೆ ನೆರೆಹೊರೆಯವರ ಮುಂದೆ ನನ್ನನ್ನು ಟೀಕಿಸುವುದಕ್ಕೆ ಪ್ರಾರಂಭಿಸಿದರು. ಇದಕ್ಕೂ ಮೊದಲು ಅವರು ನನ್ನ ಬಗ್ಗೆ ಏನು ಹೇಳಿದರೂ ನಡೆಯುವಂತಿತ್ತು. ಆದರೆ ಮುಂದೆ ನನ್ನಲ್ಲಿ ಅವರ ಬಗ್ಗೆ ಇದ್ದ ಮಾನ-ಮರ್ಯಾದೆಗಳು ಅಳಿದುಹೋದವು. 'ನಾನು ನನ್ನ ಪತಿಗೆ ಮಂತ್ರ-ಮಾಟ ಮಾಡಿಸಿದ್ದೇನೆ ಆದುದರಿಂದ ನಾನು ಹೇಳಿದಂತೆ ಅವರು ಕೇಳುತ್ತಾರೆ, ಎಂದು ಎಲ್ಲರ ಮುಂದೆ ಹೇಳತೊಡಗಿದರು.

ಭಾದ್ರಪದಮಾಸದಲ್ಲಿ ಗೋಕುಲಾಷ್ಟಮಿಯ ದಿನ ನಾವೆಲ್ಲ ವ್ರತವನ್ನಾ-ಚರಿಸಿದೆವು. ಕೃಷ್ಣನ ಜನ್ಮ ರಾತ್ರಿ ಹನ್ನೆರಡಕ್ಕೆ ಇದ್ದಿತು. ಅಲ್ಲಿಯ ವರೆಗೆ ನಾವು ಹಾಡುತ್ತ ಬಾರಿಸುತ್ತ ಕುಳಿತೆವು. ನನ್ನ ಪತಿ ಇದಕ್ಕೆ ತೀರ ವಿರುದ್ಧ-ರಾಗಿದ್ದರು. ಕಾಮನ ಹಬ್ಬದ ದಿನ ಬಣ್ಣವನ್ನಾಡುವುದು, ಸಿದ್ದೆಗೆಟ್ಟು ಹಾಡುತ್ತ ಬಾರಿಸುತ್ತ ಕುಣಿತುಕೊಳ್ಳುವುದು ಅವರ ದೃಷ್ಟಿಯಲ್ಲಿ 'ಅಸಭ್ಯವರ್ತನೆಯ ಕುರುಹುಗಳಾಗಿದ್ದವು. ನಾನು ರಾತ್ರಿ ಒಂದು ಗಂಟೆಗೆ-ಅವರ ಕೋಣೆಗೆ ಹೋದೆ. ಹೋದೊಡನೆ ಅವರು ನನಗೆ ತಿಳಿಸಿ ಹೇಳತೊಡಗಿದರು. "ಈ ಪ್ರಕಾರ ವೈಗೆ ತೋಂವರೆಕೊಡುವುದರಿಂದೇನು ಪ್ರಯೋಜನ? ಕೃಷ್ಣ ಮಹಾ ಪುರುಷನಾಗಿದ್ದ, ನಿಜ, ಅವನನ್ನು ಪೂಜಿಸುವುದು ನಮ್ಮ ಕರ್ತವ್ಯ. ಆದರೆ ಹೀಗೆ ಹಾಡು, ಬಾರಿಸುವುದರಿಂದೇನು ಲಾಭ? ಇಂತಹ ಬೂಟಾಟಿಕೆಯ ಧರ್ಮ ಬೇಡ. ಧರ್ಮದ ಸಂಬಂಧ ಸತ್ಯ ಹಾಗೂ ಪ್ರಾಮಾಣಿಕತೆಯೊಡನಿದೆ, ತೋರಿಕೆಯೊಂದಿಗಿಲ್ಲ."

ನನ್ನ ಪತಿ ಇದೇ ಮಾರ್ಗವನ್ನನುಸರಿಸುತ್ತಿದ್ದರು. ಅವರು ಭಗವದ್ಗೀತೆಯನ್ನು ಬಹಳವಾಗಿ ಹೊಗಳುತ್ತಿದ್ದರು. ಆದರೆ ಎಂದಿಗೂ ಅದನ್ನು ಕಂಠ-ಪಾಠ ಮಾಡುತ್ತಿರಲಿಲ್ಲ. ಉಪನಿಷತ್ತೂ ಅವರ ಹೊಗಳಿಕೆಗೆ ಪಾತ್ರವಾಗಿದ್ದಿತು. ಆದರೆ ಅದನ್ನೆಂದಿಗೂ ಅವರು ಓದುತ್ತಿರಲಿಲ್ಲ. ಹಿಂದೂಧರ್ಮದ ತತ್ವಗಳನ್ನು ಅವರು ಸಂಪೂರ್ಣವಾಗಿ ಒಪ್ಪುತ್ತಿದ್ದರು. 'ಆದರೆ ಅವು ಈ

ಸಮಯಕ್ಕೆ ಯೋಗ್ಯವಲ್ಲ'ವೆನ್ನುತ್ತಿದ್ದರು. ವೇದಗಳೇ ಭಾರತದ ಅವನತಿಗೆ ಕಾರಣವೆಂದು ಅವರು ತಿಳಿಯುತ್ತಿದ್ದರು. ಅಲ್ಲದೆ 'ವೇದಾಂತ ನಮ್ಮನ್ನು ಕೆಡಿಸಿತು. ನಾವು ಜಗತ್ತನ್ನು ತುಚ್ಛವೆಂದು ಬಗೆಯತೊಡಗಿದೆವು. ಈಗ ತೆಪ್ಪಗೆ ಕುಳಿತು ಉಪಯೋಗವಿಲ್ಲ.' ಎನ್ನುತ್ತಿದ್ದರು.

ಅವರಿಗೆ ಪ್ರತ್ಯುತ್ತರ ಕೊಡುವ ಸಾಮರ್ಥ್ಯ ನನಗೆಲ್ಲಿ ಬರಬೇಕು? ಆದರೆ ಅವರು ಆಗ ಪಾಶ್ಚಿಮಾತ್ಯಸಂಸ್ಕೃತಿಗೆ ಮರುಳಾಗಿದ್ದರೆಂದು ಈಗ ನನಗೆ ತಿಳಿಯುತ್ತದೆ. ಈಗ ಅವರು ಹಾಗೆ ಹೇಳುವುದಿಲ್ಲ.

೪

ಇದಾದ ಕೆಲವು ದಿನಗಳ ಬಳಿಕ ನಾವು ಅಲಹಾಬಾದಿಗೆ ಹೋದೆವು. ನನ್ನ ಪತಿ ಎರಡಂತಸ್ತಿನ ಮನೆಯೊಂದನ್ನು ಹಿಡಿದಿಟ್ಟಿದ್ದರು. ಎಲ್ಲ ಬಗೆಯ ವ್ಯವಸ್ಥೆಗೊಳಿಸಿ ಆಯಿತು. ನಮ್ಮ ಮನೆಯಲ್ಲಿ ಐವರು ಆಳುಗಳಿದ್ದರು—ಇಬ್ಬರು ಹೆಣ್ಣುಮಕ್ಕಳು. ಇಬ್ಬರು ಗಂಡಸರು. ಒಬ್ಬ ಅಡಿಗೆಯವ. ಆಗ ಮನೆಗೆಲಸಗಳಿಂದ ನನಗೆ ಸಂಪೂರ್ಣ ಸ್ವಾತಂತ್ರ್ಯ ದೊರೆಯಿತು.

ಅಲ್ಲಿ ತಾಮ್ರದ ಹಾಗೂ ಹಿತ್ತಾಳೆಯ ಪಾತ್ರೆಗಳು ಹೆಚ್ಚಾಗಿರಲಿಲ್ಲ. ಚೀನೀ ಮಣ್ಣಿನ ಪಾತ್ರೆಗಳೇ ಹೆಚ್ಚಾಗಿದ್ದವು. ಮೇಜಿನ ಮೇಲೆ ಊಟ ನಡೆಯುತ್ತಿದ್ದಿತು. ನನ್ನ ಪತಿ ಸಂಕೋಚವಿಲ್ಲದೆ ಊಟ ಮಾಡುತ್ತಿದ್ದರು. ನನಗೆ ಮಾತ್ರ ಸ್ವಲ್ಪ ಲಜ್ಜೆಯೆನಿಸುತ್ತಿದ್ದಿತು. ಮುಂದೆ ಆ ಪದ್ಧತಿಯೂ ಅವಗತವಾಯಿತು. ನಮಗೋಸುಗ ಒಂದು ಕುದುರೆಯ ಗಾಡಿಯೂ ಇದ್ದಿತು. ಹತ್ತು ಹೆಜ್ಜೆ ಹೋಗುವುದಿದ್ದರೂ ಕುದುರೆಯ ಗಾಡಿಯಿಂದಲೇ ಹೋಗುತ್ತಿದ್ದೆವು. "ಇದೇ ಫ್ಯಾಶನ್," ಎಂದು ನನ್ನ ಪತಿ ಹೇಳುತ್ತಿದ್ದರು. ಆಗ ಅವರಿಗಿನ್ನೂ ಆದಾಯ ಅಷ್ಟು ಇರಲಿಲ್ಲ. ಅದಕ್ಕೆ ಒಮ್ಮೊಮ್ಮೆ ವೆಚ್ಚ ಮೇಳಗೂಡಿಸಲಾಗದೆ ನನ್ನ ಪತಿ ಚಿಂತಾಕುಲರಾಗುತ್ತಿದ್ದರು. ಆಗ ನಾನು, "ಯಾವುದಾದರೂ ಸಣ್ಣ ಮನೆ ನೋಡಿ ತೆಗೆದುಕೊಳ್ಳಿರಿ, ಇಬ್ಬರೇ ಆಳುಗಳು ಸಾಕು." ಎಂದು ಹೇಳುತ್ತಿದ್ದರೆ ಅವರು ನಕ್ಕು ಹೇಳುತ್ತಿದ್ದರು, "ನಾನು ನನ್ನ ಬಡತನವನ್ನೇಕೆ ತೋರಿಸಿಕೊಳ್ಳಲಿ? ಬಡತನವನ್ನು ತೋರಿಸಿಕೊಳ್ಳುವುದು ದುಃಖ-

ದಾಯಕವಾಗಿರುತ್ತದೆ ನಾವು ಬಡವರೆಂಬುದನ್ನು ಮರೆತುಬಿಟ್ಟರೆ ಲಕ್ಷ್ಮಿ ತಾನಾಗಿ ನಮ್ಮ ಕಡೆಗೆ ಓಡಿ ಬರುವಳು. ವೆಚ್ಚ ಬೆಳೆಯುವುದು ದ್ರವ್ಯೋ-ಪಾರ್ಜನೆಯ ತಳಹದಿ. ಇಂತಹ ವೇಳೆಗಳಲ್ಲಿ ನಮ್ಮ ಗುಪ್ತಶಕ್ತಿಗಳು ಪ್ರಕಟಗೊಳ್ಳುತ್ತವೆ."

ನಮ್ಮ ವೆಚ್ಚ ದಿನದಿನಕ್ಕೆ ಬೆಳೆಯುತ್ತಲೇ ಇದ್ದಿತು. ವಾರಕ್ಕೆ ಮೂರು ಸಲ ಚಲನಚಿತ್ರಕ್ಕೆ ಹೋಗುತ್ತಿದ್ದೆವು. ವಾರಕ್ಕೊಮ್ಮೆ ಮಿತ್ರರಿಗೆ ಭೋಜನ. ಆಗ ನನಗೆ ತಿಳಿಯತೊಡಗಿತು, 'ಜೀವನದ ಮುಖ್ಯ ಉದ್ದೇಶ ಸುಖಭೋಗ. ಈಶ್ವರನು ನಮಗೆ ಸುಖಭೋಗವನ್ನು ಕೊಟ್ಟಾಗ ನಾವೇಕೆ ಬಿಡಬೇಕು?'

ಒಬ್ಬ ಆಂಗ್ಲ ಮಹಿಳೆ ನನಗೆ ಇಂಗ್ಲೀಷು ಸಂಗೀತ ಹೇಳಿಕೊಡಲು ಬರತೊಡಗಿದಳು. ಮನೆಯಲ್ಲಿ ಒಂದು ಹಾರ್ಮೋನಿಯಂ ಕೂಡ ತಂದಾಯಿತು. ಇವುಗಳ ಆನಂದದಲ್ಲಿ ರಾಮಾಯಣದ ಕತೆಯನ್ನು ಕೂಡ ಮರೆತುಬಿಟ್ಟೆದ್ದೆ. ಆ ಪುಸ್ತಕಗಳು ನನಗೆ ನೀರಸವಾಗಿ ತೋರತೊಡಗಿದವು. ದೇವರ ಮೇಲಿನ ವಿಶ್ವಾಸವೂ ಹಾರಿಹೋಯಿತು.

ಮುಂದೆ ದೊಡ್ಡ ದೊಡ್ಡ ಜನರೊಡನೆ ಸ್ನೇಹವೂ ಬೆಳೆಯತೊಡಗಿತು. ಇಲ್ಲಿ ಒಂದು ಹೊಸ ಸೊಸಾಯಿಟಿ ಆಗಿದ್ದಿತು. ಅದರ ಸದಸ್ಯರ ಇರುವಿಕೆ, ಆಚಾರ, ಭಾಷೆ, ವಿಚಾರಗಳೆಲ್ಲ ಒಂದೇ ಆಗಿದ್ದವು. ಈ ಸಂಸ್ಥೆಯ ಮಹಿಳೆ-ಯರೊಂದಿಗೆ ಚಲನಚಿತ್ರಮಂದಿರ, ಕುದುರೆಯ ಜೂಜು, ಟೇನಿಸ್ ಹಾಗೂ ವೃತ್ತಪತ್ರಿಕೆಗಳಲ್ಲಿಯ ಒಳ್ಳೊಳ್ಳೆಯ ಲೇಖಗಳು ಇವೇ ಮೊದಲಾದ ವಿಷಯಗಳ ಮೇಲೆ ಚರ್ಚಿಸುತ್ತಿದ್ದೆ. ಅವರ ಚಾತುರ್ಯ, ಬುದ್ಧಿಯ ತೀವ್ರತೆ ಹಾಗೂ ಚಪಲತೆಗಳಿಂದ ನನಗೆ ಅತ್ಯಂತ ಅಚ್ಚರಿಯಾಗುತ್ತಿದ್ದಿತು. 'ಅವರು ಜ್ಞಾನ ಹಾಗೂ ಪ್ರಕಾಶದ ಮೂರ್ತಿಮಂತಸ್ವರೂಪ'ವೆಂದು ಭಾವಿಸತೊಡಗಿದೆ. ಅವರು ಪರದೆಯನ್ನು ಧರಿಸದೆ ತಿರುಗಾಡುತ್ತಿದ್ದರು. ಅಲ್ಲದೆ ನನ್ನನ್ನೂ ಕರೆಯು-ತ್ತಿದ್ದರು. ನಾನು ನಾಚಿಕೆಯಿಂದ ಬರುವುದಿಲ್ಲವೆಂದು ಹೇಳುತ್ತಿದ್ದೆ. ಅವರು ಎಂದಿಗೂ ಉದಾಸ ಇಲ್ಲವೆ ಗಂಭೀರವಾಗಿರುತ್ತಿರಲಿಲ್ಲ. ಶ್ರೀದಾಸ್ ಬೇನೆಯಿಂದ ಬಳಲುತ್ತಿದ್ದರು ಆದರೆ ಶ್ರೀಮತಿ ದಾಸಳ ಮುಖದ ಮೇಲೆ ಚಿಂತೆಯ ಒಂದು

ರೀಖೆಯೂ ಕಂಡುಬರುತ್ತಿರಲಿಲ್ಲ. ಶ್ರೀ ಬಾಗಡಿ ನೈನಿತಾಲದಲ್ಲಿ ಕ್ಷಯರೋಗಕ್ಕೆ ಚಿಕಿತ್ಸೆ ಹೊಂದುತ್ತಿದ್ದರು. ಆದರೆ ಶ್ರೀವ.ತಿ ಬಾಗಡಿ ನಿತ್ಯ ಟೇನಿಸ್ ಆಡಲು ಬರುತ್ತಿದ್ದರು. ಇಂತಹ ಸಮಯದಲ್ಲಿಯು ನನ್ನ ಮನಸ್ಸಿನ ಸ್ಥಿತಿಯನ್ನು ನಾನೊಬ್ಬಳೇ ಅರಿತಿದ್ದೆ.

ಆಂಗ್ಲ ಮಹಿಳೆಯರ ಇಂತಹ ರೀತಿನೀತಿಗಳಲ್ಲಿ ನನ್ನನ್ನು ಎಳೆದು ಕೊಂಡು ಹೋಗುವ ಆಕರ್ಷಕತೆ ಇದ್ದಿತು. ನಾನು ಯಾವಾಗಲೂ ಅವರ ರೀತಿನೀತಿಗಳನ್ನು ಹೆಚ್ಚು ಲಕ್ಷಕೊಟ್ಟು ನೋಡುತ್ತಿದ್ದೆ. ನನಗೂ ಅನಿಸು-ತ್ತಿತ್ತು. ನಾನೂ ಹೀಗೆಯೇ ಸ್ವತಂತ್ರಳಾಗಬೇಕೆಂದು. ಅವರು ಆಡುತ್ತಿದ್ದ ಇಂಗ್ಲೀಷು ಮಾತು ಕೇಳಿ ಅವರು ದೇವಿಯರೆಂದೇ ಭಾವಿಸುತ್ತಿದ್ದೆ. ಅಲ್ಲದೆ ನಾನೂ ಹಾಗೆ ಆಗಲು ಯತ್ನಿಸುತ್ತಿದ್ದೆ.

ಈ ಮಧ್ಯದಲ್ಲಿ ನನಗೊಂದು ದುಃಖಜನಕವಾದ ಕಟು ಅನುಭವ ಉಂಟಾಗತೊಡಗಿತು. ಮೊದಲಿನಂತೆಯೇ ನನ್ನ ಪತಿ ನನ್ನನ್ನು ಡಿಯರ್, ಡಾರ್ಲಿಂಗ್ ಎಂದು ಕರೆಯುತ್ತಿದ್ದರೂ ಅವರ ಮಾತುಗಳಲ್ಲಿ ಸ್ವಲ್ಪ ಅಂತರ ಕಂಡುಬರತೊಡಗಿತು ಈ ಮಾತು ಅವರ ಹೃದಯದಾಳದಿಂದ ಬಂದವುಗಳಲ್ಲ, ಬರಿಯ ಬಾಯಿಂದ ಬಂದಂತಹವೆಂದು ನನಗೆ ಅನಿಸುತ್ತಿತ್ತು. ಅವರಲ್ಲಿ ನನಗೆ ಮೊದಲಿನಷ್ಟು ಶ್ರದ್ಧೆ ಉಳಿದಿರಲಿಲ್ಲ. ಅವರಿಗೆ ತಲೆನೋವು ಪ್ರಾರಂಭವಾದರೆ ನನ್ನ ಎದೆ ನಡುಗುವುದು ನಿಂತುಹೋಯಿತು. ನನ್ನಲ್ಲಿ ಆತ್ಮಗೌರವ ಹೆಚ್ಚಾಗಿ ತಲೆಯೆತ್ತತೊಡಗಿತು. ಸಿಂಗಾರಮಾಡಿಕೊಳ್ಳುವುದು ನನ್ನ ಕರ್ತವ್ಯವೆಂದು ನಾನು ಸಿಂಗರಿಸಿಕೊಳ್ಳುತ್ತಿದ್ದೆ. ನನ್ನಲ್ಲಿ ಸೌಂದರ್ಯದ ಮದ ಹೆಚ್ಚಾಗಿ ಆವಿ-ರ್ಭವಿಸಿತು. ನಾನು ಯಾರಿಗೋಸುಗ ಬದುಕಿಲ್ಲ, ನನಗೋಸುಗವೇ ಬದುಕಿ ದ್ದೇನೆ. ತ್ಯಾಗ ಸೇವೆಯ ಭಾವ ನನ್ನ ಹೃದಯದಿಂದ ಲೋಪವಾಗತೊಡಗಿತು.

ಆಗಲೂ ನಾನು ನನ್ನ ಪರದೆಯ ಸಂಸ್ಕಾರ ಬಿಟ್ಟಿರಲಿಲ್ಲ. ಆದರೆ ಹೃದಯ ನನ್ನ ಸೌಂದರ್ಯದ ವಿಮರ್ಶೆಯನ್ನು ಕೇಳಲು ಕಾದಿತ್ತು. ಒಂದು ಸಲ ಶ್ರೀ. ದಾಸ್ ಹಾಗೂ ಅನೇಕ ಸಜ್ಜನರ ವೃಂದ ಮನೆಯಲ್ಲಿ ಕುಳಿತಿದ್ದಿತು. ನಾನೂ ಅವರೊಡನೆ ಕುಳಿತಿದ್ದೆ. ನನ್ನ ಪತಿಗೆ ನನ್ನ ಪರದೆಯ ಸಂಸ್ಕಾರ ದಿಂದ ಖೇದವಾಗುತ್ತಿತ್ತು. ಅವರು ಇದು ಸಭ್ಯತೆಯಲ್ಲಿ ಕಂಡುಬರುವ ಒಂದು

ಕಲಂಕವೆಂದು ತಿಳಿದಿದ್ದರು. 'ಅವಳು ರೂಪ, ಆಭರಣಗಳಲ್ಲಿ ಯಾರಿಂದ ಲಾದರೂ ಕಡಿಮೆ ಇರುವಳೆಂದೇನೂ ಪರದೆ ಧರಿಸುವುದಿಲ್ಲ, ಆದರೆ ಹಾಗೆಯೇ ಮುಖ ತೋರಲು ಅವಳಿಗೆ ಲಜ್ಜೆಯೆನಿಸುತ್ತದೆ' ಎಂದವರು ತಿಳಿಸಿಕೊಡಲು ಯತ್ನಿಸುತ್ತಿದ್ದರು. ಅಲ್ಲದೆ ಅದನ್ನು ಬಿಡಲು ನನಗೂ ಬೋಧಮಾಡುತ್ತಿದ್ದರು. ಕೊನೆಗೊಮ್ಮೆ ಅದನ್ನು ತ್ಯಜಿಸಿಬಿಟ್ಟೆ. ಅಲಹಾಬಾದಿಗೆ ಬಂದು ಎರಡು ವರ್ಷ ಗಳಾವ ನಂತರ ನಾನು ನನ್ನ ಪರದೆಯನ್ನು ತ್ಯಜಿಸಿ ನನ್ನ ಪತಿಯೊಡನೆ ತಿರು ಗಾಡಲಾರಂಭಿಸಿದೆ. ಅಲ್ಲದೆ ಟೆನಿಸ್ ಆಡಲು ಮೊದಲುಮಾಡಿದೆ. ಕ್ಲಬ್‌ಗೆ ಹೋಗಲು ಪ್ರಾರಂಭಿಸಿದೆ. ಮೊದಲು ಈ ಟೆನಿಸ್ ಕ್ಲಬ್ ನನಗೆ ಮೋಜಿ ನಂತೆ ತೋರುತ್ತಿದ್ದಿತು. ಅವರು ವ್ಯಾಯಾಮಕ್ಕೋಸುಗ ಬರುವುದಿಲ್ಲ. ಫ್ಯಾಶನ್‌ಗಾಗಿ ಇರುತ್ತಾರೆ. ಅವರ ಪ್ರತಿಯೊಂದು ಕೃತಿಗಳಲ್ಲಿ, ಬಳಕುವುದರಲ್ಲಿ, ಓಡುವುದರಲ್ಲಿ, ಜಿಗಿಯುವುದರಲ್ಲಿ ಪ್ರತಿಯೊಂದರಲ್ಲೂ ಕೃತ್ರಿಮತೆ. ಇದರ ಉಪಯೋಗ ವ್ಯಾಯಾಮವಲ್ಲ, ತೋರಿಕೆ.

ಕ್ಲಬ್ಬಿನಲ್ಲಿ ಇದಕ್ಕೂ ವಿಚಿತ್ರವಾದ ಅವಸ್ಥೆಯಿದ್ದಿತು. ಎಲ್ಲವೂ ತೋರಿಕೆಯಿದ್ದಿತು. ಜನ ಆರಿಸಿದ ನಿಸ್ಸಾರವಾದ ಇಂಗ್ಲೀಷು ಶಬ್ದಗಳನ್ನು ಉಪಯೋಗಿಸುತ್ತಿದ್ದರು; ಹುಚ್ಚನಗೆ ನಗುತ್ತಿದ್ದರು. ಅಲ್ಲಿಯ ಸ್ತ್ರೀಯರ ಮಿತಿಮೀರಿದ ನಿರ್ಲಜ್ಜತೆ, ಹಾಗೂ ಪುರುಷರ ಭಾವಶೂನ್ಯ ಸ್ತ್ರೀಪೂಜೆ ನನ-ಗೊಂದೂ ಅರ್ಥವಾಗುತ್ತಿರಲಿಲ್ಲ ನಾಲ್ಕೂ ಕಡೆಗೆ ಇಂಗ್ಲೀಷು ಸಂಸ್ಕೃತಿ ಆವರಿಸಿಬಿಟ್ಟದ್ದಿತು. ನಾನೂ ಅದರ ಅನುಕರಣ ಮಾಡತೊಡಗಿದೆ. ಎಲ್ಲ ಬಗೆಯಿಂದ ಸುಂದರಿಯಾಗಿ ಮೆರೆಯಬೇಕೆಂಬಾಶೆಯಿಂದ ದಿನಾಲು ಒಂದೊದು ತರಹದ ಶೃಂಗಾರ, ದಿನಕ್ಕೊಂದು ಬಗೆಯ ಉಡುಪು ಪ್ರಾರಂಭಿಸಿದೆ. ಈಗ ನನಗೆ ನನ್ನ ಪತಿಯ ಶುಶ್ರೂಷೆಗಿಂತ ನನ್ನ ಸಿಂಗಾರ ಉಡುಪುಗಳ ಕಡೆಗೇ ಹೆಚ್ಚಾಗಿ ಮನಸ್ಸು ಹರಿಯತೊಡಗಿತು. ಜನರು ನನ್ನನ್ನು ಸ್ತುತಿಸತೊಡಗಿ ದೊಡನೆ ನನ್ನಲ್ಲಿಯೂ ಅಭಿಮಾನದಿಂದೊಡಗೂಡಿದ ಆನಂದ ತೋರತೊಡ-ಗಿತು. ನನ್ನ ಲಜ್ಜೆಯ ಸೀಮೆ ಬೆಳೆಯತೊಡಗಿತು. ನನ್ನನ್ನು ರೋಮಾಂಚಿತ ಗೊಳಿಸುವ ಕಡೆಗಣ್ಣನೋಟ, ವಿಷ ತಿಂದು ಸಾಯುವುದುಚಿತವೆಂದು ಕಂಡು- ಬರುವ ನಗುಗಣ್ಣ ದೃಷ್ಟಿಗಳಿಂದ ನನಗೆ ಉನ್ಮಾದಪೂರ್ಣ ಆನಂದವಾಗು-

ತ್ತಿದ್ದಿತು. ಆದರೆ ಇವುಗಳಲ್ಲಿ ಆಂತರಿಕ ದೃಷ್ಟಿಯಿಂದ ಪರಿಶೀಲಿಸಿದಾಗ ಒಂದು ಬಗೆಯ ಭಯವೂ ಉತ್ಪನ್ನವಾಗುತ್ತಿದ್ದಿತು.

ಒಮ್ಮೊಮ್ಮೆ ಕ್ಲಬ್ಬಿಗೆ ಹೋಗಬಾರದೆಂದೇ ನಿಶ್ಚಯಿಸುತ್ತಿದ್ದೆ. ಆದರೆ ವೇಳೆಯಾದೊಡನೆ ನನ್ನ ಕಾಲುಗಳು ತಾವಾಗಿಯೇ ಹೋಗುತ್ತಿದ್ದವು. ನನ್ನ ಮನಸ್ಸು ಸದಸದ್ವಿವೇಕಬುದ್ಧಿಯ ಕೈಯಲ್ಲುಳಿಯಲಿಲ್ಲ.

೫

ಮತ್ತೆ ಎರಡು ವರುಷಗಳು ಕಳೆದುಹೋದವು. ನನ್ನ ಪತಿಯ ಸ್ವಭಾವ ವಿಚಿತ್ರವಾಗಿ ಪರಿವರ್ತನೆಗೊಳ್ಳಲಾರಂಭಿಸಿತು. ಅವರು ಉದಾಸರಾಗತೊಡಗಿದರು. ನನ್ನೊಡನೆ ಅಷ್ಟು ಮಾತನಾಡುತ್ತಿರಲಿಲ್ಲ ಇವರು ಗಭೀರ ಚಿಂತೆಗೆ ಒಳಗಾಗಿರಬಹುದು, ಇಲ್ಲವೆ ಬೇನೆಗೊಳಗಾಗಿರಬಹುದೆಂದು ನನಗೆ ಅನಿಸುತ್ತಿತ್ತು. ಯಾವಾಗಲೂ ಮೋರೆಯೊಣಗಿರುತ್ತಿತ್ತು. ಸಣ್ಣ ತಪ್ಪಿಗಾಗಿ ಆಳುಗಳ ಮೇಲೆ ರೇಗಿಗೇಳತೊಡಗಿದರು. ಹೊರಗೆ ಹೋಗುವುದನ್ನೇ ನಿಲ್ಲಿಸಿದರು.

ಒಂದು ತಿಂಗಳು ಮೊದಲು ನೂರು ಕೆಲಸಗಳಿದ್ದರೂ ಬಿಟ್ಟು ಕ್ಲಬ್ಬಿಗೆ ಹೋಗುತ್ತಿದ್ದರು. ಆದರೆ ಮುಂದೆ ತಮ್ಮ ಕೋಣೆಯಲ್ಲಿ ಚೌಕವೊಂದರ ಮೇಲೆ ಕುಳಿತುಕೊಂಡು ವರ್ತಮಾನಪತ್ರ ಇಲ್ಲವೆ ಪುಸ್ತಕ ಓದುತ್ತಿದ್ದರು. ನನಗೆ ಏನೊಂದೂ ಹೊಳೆಯದಾಯಿತು.

ಒಂದು ದಿನ ಅವರಿಗೆ ಜ್ವರ ಬಂದವು. ದಿನವೆಲ್ಲ ಅರಿವಿಲ್ಲದವರಾಗಿದ್ದರು. ನಾನು ಅವರ ಬಳಿ ಕುಳಿತುಕೊಳ್ಳಲಾರದವಳಾದೆ. ನನ್ನ ಮನಸ್ಸು ಒಂದು ಕಾದಂಬರಿಯ ಕಡೆಗೆ ಒಲೆದಿದ್ದಿತು. ಅವರ ಬಳಿ ಹೋಗುತ್ತಿದ್ದೆ, ಎರಡೇ ಕ್ಷಣಗಳಲ್ಲಿ ತಿರುಗಿ ಬಂದುಬಿಡುತ್ತಿದ್ದೆ. ಕ್ಲಬ್ಬಿಗೆ ಹೋಗುವ ಸಮಯವಾದೊಡನೆ ಉಭಯಸಂಕಟವಾಗತೊಡಗಿತು ಮನಸ್ಸಿನಲ್ಲಿ ಬಹಳ ಹೊತ್ತಿನವರೆಗೆ ಸಂಗ್ರಾಮವಾಗತೊಡಗಿತು. 'ನಾನಿಲ್ಲಿರುವುದರಿಂದ ಅವರಿಗೇನೂ ಬೇಗನೆ ಗುಣವಾಗಲಾರದು.' ಎಂದುಕೊಂಡು ಒಳ್ಳೆಯ ಬಟ್ಟೆ ಧರಿಸಿ, ರ್‍ಯಾಕೆಟ್ ಹಿಡಿದುಕೊಂಡು ಕ್ಲಬ್ಬಿಗೆ ಹೊರಟೆ. ಅಲ್ಲಿ ಶ್ರೀಮತಿ ದಾಸ್ ಹಾಗೂ ಶ್ರೀಮತಿ

ಬಾಗಡಿಯುವರಿಗೆ ನನ್ನ ಪತಿಯ ಸ್ಥಿತಿಯನ್ನು ಬಣ್ಣಿಸಿದೆ. ಹಾಗೂ ಸಜಲ ನೇತ್ರದಿಂದ ಸುಮ್ಮನೆ ಕುಳಿತೆ. ಬಳಿಕ ಶ್ರೀದಾಸ್‌ರು ಆಡಲು ಕರೆದಾಗ ಆಡಲು ಹೋದೆ.

ಇಂದಿಗೆ ಮೂರು ವರುಷಗಳ ಮೊದಲು ನನ್ನ ಪತಿಗೆ ಹೀಗೆಯೇ ಒಮ್ಮೆ ಜ್ವರ ಬಂದಿದ್ದವು. ನಾನು ಆಗ ಹಗಲಿರುಳು ಅವರ ಬಳಿಯಲ್ಲಿ ಕುಳಿತು ಗಾಳಿ ಬೀಸುತ್ತಿದ್ದೆ. ಆಗ ಹೃದಯ ವ್ಯಾಕುಲವಾಗಿತ್ತು. ಅಲ್ಲದೆ ಅದರ ಬದಲು ನನಗೇ ಜ್ವರ ಬಂದರೆ ಒಳಿತು, ಎಂದೆನಿಸುತ್ತಿತ್ತು. ಆದರೆ ಈ ಸಲ ನನ್ನ ಹೃದಯ ಸ್ನೇಹಶೂನ್ಯವಾಗಿದ್ದಿತು; ತೋರಿಕೆ ಹೆಚ್ಚಾಗಿದ್ದಿತು. ಅಂದು ಪದ್ಧತಿಯಂತೆ ನಾನು ರಾತ್ರಿ ಒಂಬತ್ತು ಗಂಟೆಗೆ ಮನೆಗೆ ಮರಳಿದೆ. ನನ್ನ ಪತಿಯ ಮನಸ್ಸು ಸ್ವಲ್ಪ ತಿಳಿಯಾಗಿದ್ದಿತು. ನಾನು ನನ್ನ ಸ್ವಾರ್ಥಪರತೆಯನ್ನು ಧಿಕ್ಕರಿಸಿಕೊಳ್ಳುತ್ತ ಒರಗಿದೆ.

ನಾನೀಗ ಇಂಗ್ಲೀಷ ಕಾದಂಬರಿಗಳನ್ನು ಓದಿ ಅರ್ಥಮಾಡಿಕೊಳ್ಳುವಷ್ಟು ಪ್ರಬುದ್ಧಳಾಗಿದ್ದೆ. ನಮ್ಮಲ್ಲಿ ಉತ್ಕೃಷ್ಟ ಹಾಗೂ ಆಲೋಚನಾತ್ಮಕ ಮಾತುಕತೆ ನಡೆಯುತ್ತಿದ್ದಿತು. ನಮ್ಮ ಸಭ್ಯತೆಯ ಆದರ್ಶ ಈಗ ಉಚ್ಚವಾಗಿದ್ದಿತು. ನಾವು ನಮ್ಮ ಹಳೆಯ ಮಿತ್ರರನ್ನು ಭೆಟ್ಟಿಯಾಗುವುದು ಕೂಡ ಕೀಳೆಂದು ಭಾವಿಸುತ್ತಿದ್ದೆವು. ನಮಗಿಂತ ಕಡಿಮೆ ತರಗತಿಯವರೊಡನೆ ಮಾತನಾಡುವುದು ಹೇಯವೆಂದು ನಮ್ಮ ಕಲ್ಪನೆಯಾಗಿದ್ದಿತು. ಆಳುಗಳನ್ನು ಆಳುಗಳೆಂದೇ ತಿಳಿಯುತ್ತಿದ್ದೆವಲ್ಲದೆ ಅವರ ಮೇಲೆ ನಮ್ಮ ಸಂಪೂರ್ಣ ಅಧಿಕಾರ ನಡಿಸಲು ಕೊಂಚವೂ ಹಿಂದುಮುಂದೆ ನೋಡುತ್ತಿರಲಿಲ್ಲ. ನಮ್ಮನ್ನು ಅವರು 'ಸಾಹೇಬ'ರೆಂದು ತಿಳಿಯಬೇಕೆಂದೇ ನಮ್ಮ ಆಶೆಯಾಗಿದ್ದಿತು. ನನಗೆ ಭಾರತೀಯ ಪದ್ಧತಿಯ ಮಹಿಳೆಯರನ್ನು ಕಂಡು ಹೇಸಿಗೆಯಾಗುತ್ತಿದ್ದಿತು. ಅವರಲ್ಲಿ ಶಿಷ್ಟತೆಯಿರಲಿಲ್ಲಂವೆದು ನಾನು ಭಾವಿಸುತ್ತಿದ್ದೆ.

ಮುಂದೆ ಮೂರು ನಾಲ್ಕುದಿನಗಳ ವರೆಗೆ ನನ್ನ ಪತಿಗೆ ಜ್ವರ ಬರುತ್ತಲೇ ಇತ್ತು. ಮರುದಿನದಿಂದ ನಾನು ಕ್ಲಬ್ಬಿಗೆ ಹೋಗುವುದನ್ನು ನಿಲ್ಲಿಸಿಬಿಟ್ಟೆ. ಶ್ರೀಮತಿ ದಾಸ್ ಒಬ್ಬ ಪರಿಚಾರಿಕೆಯನ್ನು ನಿಯಮಿಸಲು ಸೂಚಿಸಿದಳು. ನಾನೂ ಒಪ್ಪಿ ಅಂದೇ ಒಬ್ಬ ಪರಿಚಾರಿಕೆಯನ್ನು ನಿಯಮಿಸಿಬಿಟ್ಟೆ. ಇದರಿಂದ

ನನಗೆ ಬಿಡುವು ದೊರೆಯಿತು. ನಾನು ಎರಡು ದಿನಗಳ ವರೆಗೆ ಕ್ಲಬ್ಬಿಗೆ ಹೋಗದಿದ್ದರೂ ನನ್ನ ಮನಸ್ಸು ಅಲ್ಲಿಯೇ ನಾಟಿಕೊಂಡಿದ್ದಿತು.

ಮುಂದೆ ಒಂದು ದಿನ ಮಧ್ಯಾಹ್ನ ಮೂರು ಗಂಟೆಯ ಹೊತ್ತಿಗೆ ನಾನು ಒಂದು ಇಂಗ್ಲೀಷು ಪುಸ್ತಕ ಓದುತ್ತ ಕುಳಿತಾಗ ತಟ್ಟನೆ ಒಂದು ಯೋಚನೆ ಹೊಳೆಯಿತು. "ನನ್ನ ಪತಿಯ ಬೇನೆ ಅಸಾಧ್ಯವಾಗಿಬಿಟ್ಟರೆ?" ಇದರಿಂದ ನನಗೆ ಲೇಶವೂ ದುಃಖವಾಗಲಿಲ್ಲ. ನಾನು ಈ ಶೋಕಮಯ ಕಲ್ಪನೆಯಿಂದ ಮನಸ್ಸಿನಲ್ಲಿಯೇ ಸಂತೋಷಿತಳಾದೆ. ಶ್ರೀಮತಿ ದಾಸ್, ಶ್ರೀಮತಿ ನಾಯ್ಡು, ಶ್ರೀಮತಿ ಶ್ರೀವಾಸ್ತವ, ಶ್ರೀಮತಿ ಖರೆ, ಶ್ರೀಮತಿ ಶರಗಾ ನನ್ನನ್ನು ಸಮಾಧಾನಪಡಿಸಲು ಬರುವರು. ಆಗ ನಾನು ನೀರೂರುವ ಕಣ್ಣುಗಳಿಂದ ಏಳುವೆ, ಮತ್ತು, 'ನನ್ನ ಸರ್ವಸ್ವವೂ ನಾಶವಾಯಿತು. ಈಗ ನನ್ನ ಜೀವನವು ಬಿರುಗಾಳಿ ಬೀಸುವ ಮಧ್ಯರಾತ್ರಿಯಲ್ಲಿಯ, ಮಸಣದಲ್ಲಿಯ ಹಣತೆಗೆ ಸಮಾನವಾಯಿತು. ಆದಕ್ಕಾಗಿ ಈ ನನ್ನ ಅವಸ್ಥೆಗೆ ದುಃಖ ಪ್ರಕಟಿಸಿದಿರಿ. ನನಗೆ ಸಾಧ್ಯವಿದ್ದ ಮಟ್ಟಿಗೆ ನಾನು ಚೆನ್ನಾಗಿ ನನ್ನ ಜೀವನ ಸಾಗಿಸಿಕೊಂಡು ಹೋಗುವೆ.' ನಾನು ಈ ರೀತಿಯಾಗಿ ನನ್ನ ಶೋಕಪೂರ್ಣವಾದ ಭಾಷಣದ ಸಿದ್ಧತೆಯನ್ನು ಮಾಡಿದೆ. ಅಲ್ಲದೆ ಹೆಣದೊಡನೆ ಹಾಕಿಕೊಂಡು ಹೋಗಲಿರುವ ಬಟ್ಟೆಯನ್ನೂ ಯೋಚಿಸಿ ಇಟ್ಟುಕೊಂಡೆ.

ನಗರದಲ್ಲಿ ಈ ಘಟನೆಯ ಬಗ್ಗೆ ಸಾಕಷ್ಟು ಚರ್ಚೆಯಾಗುವುದು. ಎಲ್ಲ ಕ್ಯಾಂಟೋನ್‌ಮೆಂಟಿನ ಜನರು ನನಗೆ ಸಮವೇದನೆಯ ಪತ್ರಗಳನ್ನು ಕಳಿಸುವರು. ಮುಂದೆ 'ನಾನು ಎಲ್ಲರ ಪತ್ರಗಳಿಗೆ ಉತ್ತರಕೊಡಲು ಸಾಧ್ಯವಿಲ್ಲ. ಹೃದಯ ಚೂರುಚೂರಾಗಿ ಹೋಗಿದೆ. ದುಃಖದ ವಿನಾ ಬೇರೆ ಏನೂ ಕಾರ್ಯಕ್ರಮವನ್ನಿಟ್ಟಿಲ್ಲ. ನನ್ನ ಪತಿಯ ಸದ್ಗತಿಗಾಗಿ ಇಚ್ಛಿಸುವ ಜನರಿಗೆ ನನ್ನ ಕೃತಜ್ಞತಾಪೂರ್ವಕ ವಂದನೆಗಳು.' ಎಂದು ವರ್ತಮಾನಪತ್ರಿಕೆಗೆ ಪ್ರಕಟನೆ ಕೊಡುವೆ.

ನಾನು ಈ ವಿಚಾರಗಳಲ್ಲಿ ಮುಳುಗಿದಾಗ ಪರಿಚಾರಿಕೆ ಬಂದು ಹೇಳಿದಳು, "ತಮ್ಮನ್ನು ರಾಯರು ಸ್ಮರಿಸಹತ್ತಿದ್ದಾರೆ."

ಅದು ನನ್ನ ಕ್ಲಬ್ಬಿಗೆ ಹೋಗುವ ಸಮಯವಾಗಿದ್ದಿತು. ಅವರ ಕರೆ ನನಗೆ ಕಠೋರವಾಗಿ ಕಂಡಿತು. ಆದರೆ ಮಾಡುವುದೇನು? ಹೋಗಲೇಬೇಕಾ-

ಯಿತು. ನನ್ನ ಪತಿ ಬೇನೆಯಿಂದ ಬಳಲುತ್ತಿದ್ದು ಸುಮಾರು ಒಂದು ತಿಂಗಳಾಗಿದ್ದಿತು. ಅವರು ಅತ್ಯಂತ ಅಶಕ್ತರಾಗಿದ್ದರು. ನನ್ನೆಡೆಗೆ ಅವರು ವಿನಯಪೂರ್ಣದೃಷ್ಟಿಯಿಂದ ನೋಡುತ್ತಿದ್ದಾಗಲೇ ಅವರ ಕಣ್ಣುಗಳಲ್ಲಿ ನೀರೂರಿ ಬಂದವು. ನಾನು ಕುಳಿತೆ. "ಬೇರೆ ಯಾವ ಡಾಕ್ಟರರನ್ನಾದರೂ ಕರೆಯಲೇ?" ಎಂದು ಕೇಳಿದೆ. "ನನಗೆ ಇಲ್ಲಿ ಸರಿಯಾಗುವುದು ಸಾಧ್ಯವೇ ಇಲ್ಲ. ನನ್ನನ್ನು ಕೃಪೆಮಾಡಿ ನನ್ನ ತಾಯಿಯ ಬಳಿಗೆ ಕಳಿಸು," ಎಂದು ಕರುಣಾಮಯ ದೃಷ್ಟಿಯಿಂದ ಹೇಳಿದರು. "ಇಲ್ಲಿಯದರಕ್ಕಿಂತ ಅಲ್ಲಿ ನಿಮಗೆ ಶುಶ್ರೂಷೆ ಚೆನ್ನಾಗಿ ಆಗುವುದೆಂದು ನೀವು ಬಗೆದಿದ್ದೀರಾ?" ಎಂದು ಕೇಳಿದೆ. "ನನ್ನ ಮನಸ್ಸು ತಾಯಿಯನ್ನು ಕಾಣಲು ಇಷ್ಟೇಕೆ ಹಾತೊರೆಯುತ್ತಿದೆಯೋ ನಾನರಿಯೆ. ಆದರೆ ಅಲ್ಲಿ ಔಷಧವಿಲ್ಲದಲೆ ಗುಣವಾಗುವುದೆಂದೆನಿಸಹತ್ತಿದೆ," ಎಂದು ಹೇಳಿದರು. "ಇದು ತಮ್ಮ ವಿಚಾರ ಮಾತ್ರ" ಎಂದು ನಾನೆಂದೆ. "ಇದು ನಿಜವಿರಬಹುದು. ಆದರೆ ಹೇಗಾದರೂ ಮಾಡಿ ಕಳಿಸಿಕೊಟ್ಟುಬಿಡು. ನಾನು ರೋಗದಿಂದ ಬಳಲುತ್ತಿಲ್ಲ. ಜೀವನದಿಂದ ದುಃಖಿತನಾಗಿ ಬಳಲುತ್ತಿದ್ದೇನೆ" ಎಂದು ಉತ್ತರವಿತ್ತರು. ನಾನು ಆಶ್ಚರ್ಯದಿಂದ ಅವರ ಕಡೆಗೆ ನೋಡಿದೆ.

"ನನಗೆ ಈ ಜೀವನದಲ್ಲಿ ಬೇಸರು ಬಂದುಬಿಟ್ಟಿದೆ. ನಾವೆಲ್ಲ ಓಡುತ್ತಿದ್ದುದು ಮರೀಚಿಕೆಯ ಕಡೆಗೆ ಎಂದು ನನಗೆ ತಿಳಿದುಬಂದಿದೆ. ಆಗ ನಾನು ಬಾಹ್ಯಾಡಂಬರಕ್ಕೆ ಮೆಚ್ಚುತ್ತಿದ್ದೆ. ಆದರೆ ಈಗ ಅದರ ಒಳಗಣ ಪರಿಸ್ಥಿತಿ ತಿಳಿದುಹೋಗಿದೆ. ಈ ನಾಲ್ಕು ವರುಷಗಳಲ್ಲಿ ನನಗೆ ಅನೇಕ ಅನುಭವಗಳು ಬಂದಿವೆ. ಆದುದರಿಂದ ಅಲ್ಲಿ ಹೋಗುವುದೇ ಸೂಕ್ತವೆಂದೆನಿಸಹತ್ತಿದೆ. ಇಲ್ಲಿ ಹೃದಯದ ಶಾಂತಿಯಿಲ್ಲ, ಆತ್ಮಿಕ ಆನಂದವಿಲ್ಲ. ಇಲ್ಲಿ ಒಂದು ಉನ್ಮತ್ತ, ಅಶಾಂತಿಮಯ ಹಾಗೂ ಸ್ವಾರ್ಥಪೂರ್ಣ ಜೀವನವಿದೆ; ನೀತಿಯಿಲ್ಲ, ಧರ್ಮವಿಲ್ಲ, ಸಹಾನುಭೂತಿಯಿಲ್ಲ, ಸಹೃದಯತೆ ಇಲ್ಲ. ಪರಮಾತ್ಮನಿಗೋಸುಗವಾದರೂ ನನ್ನನ್ನು ಈ ಬೆಂಕಿಯಿಂದ ಉಳಿಸು. ಉಪಾಯ ಹೊಳೆಯದಿದ್ದರೆ ತಾಯಿಗೊಂದು ಕಾಗದ ಹಾಕು. ಅವಳಿಲ್ಲಿ ಅವಶ್ಯವಾಗಿ ಬರುವಳು. ಅವಳಿಗೆ ಈ ಸೊಸಾಯಟಿಯ ಗಂಧ ತಗಲಿಲ್ಲ ಅವಳ ಮಮತಾಪೂರ್ಣ ದೃಷ್ಟಿ, ಸ್ನೇಹಪೂರ್ಣ ಶುಶ್ರೂಷೆ, ನೂರು ಔಷಧಗಳಿಗಿಂತ ಮಿಗಿಲಾದವು. ಅವಳ ತೊಡೆಯ ಮೇಲೆ ತಲೆಯಿಟ್ಟು ಸತ್ತುಹೋದರೂ ನನಗೆ ಶಾಂತಿ ದೊರೆಯುವುದು."

ಅವರು ಬೇನೆಯ ಭರದಲ್ಲಿ ಬಡಬಡಿಸುತ್ತಿದ್ದಾರೆಂದು ನನಗನಿಸಿತು. ನಾನು ಪರಿಚಾರಿಕೆಗೆ ಹೇಳಿದೆ, "ಸ್ವಲ್ಪ ಟೆಂಪರೇಚರ್ ನೋಡು. ನಾನೀಗ ಡಾಕ್ಟರ ಬಳಿ ಹೋಗಿ ಬರುತ್ತೇನೆ." ನನ್ನ ಹೃದಯ ಅಜ್ಞಾತ ಭೀತಿಯಿಂದ ನಡುಗತೊಡಗಿತು. ಪರಿಚಾರಿಕೆ ಥರ್ಮಾಮಿಟರ್ ಹಿಡಿದಳು. ಅವಳು ಅದನ್ನು ನನ್ನ ಪತಿಯು ಬಳಿಗೆ ಒಯ್ದುದೇ ತಡ, ಅದನ್ನವರು ಕಸಿದುಕೊಂಡು, ಬೀಸಿ ಒಡೆದುಹಾಕಿಬಿಟ್ಟರು. ಥರ್ಮಾಮಿಟರ್ ತುಂಡುತುಂಡಾಗಿಹೋಯಿತು. ಅವರು ನನ್ನನ್ನು ಅವಹೇಳನೆಯಿಂದ ನೋಡುತ್ತ, "ನಾನು ಕ್ಲಬ್ಬಿಗೆ ಹೊರಟ-ದ್ದೇನೆಂದು ಸ್ವಚ್ಛವಾಗಿ ಏಕೆ ತಿಳಿಸುವುದಿಲ್ಲ? ಉತ್ತಮ ಬಟ್ಟೆ ಧರಿಸಿದ್ದೀ. ತಿರುಗಾಡುತ್ತ ಡಾಕ್ಟರರ ಬಳಿಗೆ ಹೋಗುತ್ತೀಯಲ್ಲವೇ? ಆಗ ಅವರಿಗೆ 'ಬೆಂಕಿ ಹತ್ತುವ ಬಿಂದುವಿಗೆ ಉಷ್ಣತಾಮಾನ ಮುಟ್ಟಿದೆ'ಯೆಂದು ತಿಳಿಸಬೇಕು." ಎಂದು ಹೇಳಿದರು.

ನಾನು ಇನ್ನಷ್ಟು ಭಯಭೀತಳಾದೆ. ಕೊರಳು ಉಬ್ಬಿದವು. ನನ್ನ ಪತಿ ನಿಟ್ಟುಸಿರುಬಿಟ್ಟರು. ನಾನು ಡಾಕ್ಟರರ ಕಡೆಗೆ ಹೋಗಲು ಹೊರಟೆ. ಅವರು ಎದ್ದು ಕುಳಿತು ವಿನೀತಭಾವದಿಂದ ಹೇಳಿದರು, "ಶ್ಯಾಮೂ, ನಿನಗೆ ಸ್ವಲ್ಪ ಹೇಳ ಬೇಕಾಗಿದೆ. ಎರಡು ವಾರಗಳಿಂದ ಯೋಚಿಸುತ್ತಿದ್ದೇನೆ. ಸಾಹಸವಾಗಲಿಲ್ಲ. ಇಂದು ಹೇಳಿಯೇಬಿಡಬೇಕೆಂದು ನಿಶ್ಚಯಿಸಿದ್ದೇನೆ. ಇನ್ನು ನಾನು ಮನೆಗೆ ಹೋಗಿ ಮೊದಲಿನಂತೆ ನನ್ನ ಜೀವನ ಸಾಗಿಸಬೇಕೆಂದು ಯೋಚಿಸುತ್ತಿದ್ದೇನೆ. ನನಗೆ ಈ ಪರಿಯ ಜೀವನದಿಂದ ನಿಜವಾಗಿ ಹೇಸಿಕೆಯಾಗಿದೆ. ಇದೇ ನನ್ನ ಬೇನೆಯ ಕಾರಣ. ನಾನು ನಿನ್ನನ್ನು ಪುನಃ ನತಮುಖಿ, ಪರದೆ ಧರಿಸುವಳು, ರಾಮಾಯಣಪ್ರೇಮಿಯ ರೂಪದಲ್ಲಿ ಕಾಣಲಿಚ್ಛಿಸುತ್ತೇನೆ. ನೀನು ನನ್ನನ್ನು ನಿರಾಶೆಗೊಳಿಸಲಿಕ್ಕಿಲ್ಲವೆಂದು ಭಾವಿಸುತ್ತೇನೆ. ಆ ಸಾದಾ ಇರುವಿಕೆಯಲ್ಲಿಯೇ ಸುಖವಿದೆಯೆಂದು ಈಗ ನನಗೆ ತಿಳಿಯಿತು. ನೀನು ನನ್ನ ಆಜ್ಞೆಯನ್ನು ಪಾಲಿಸಿರುವೆ. ಈ ಸಲ ನಿರಾಶೆಗೊಳಿಸಬೇಡ. ಇಲ್ಲವಾದರೆ ಇದರಿಂದ ಭಯಂಕರ ಪರಿಣಾಮ ಉಂಟಾದೀತು." ಎಂದು ಹೇಳಿದರು.

ನಾನು ಉತ್ತರಕೊಡದಾದೆ. 'ಈ ಸ್ವಾತಂತ್ರ್ಯದಲ್ಲಿ ಎಷ್ಟೊಂದು ಸುಖ ವಿದೆ. ಈ ಸುಖ ಅಲ್ಲಿ ಎಲ್ಲಿ? ಇಷ್ಟೊಂದು ದಿನಗಳ ವರೆಗೆ ಸ್ವಾತಂತ್ರ್ಯದಲ್ಲಿದ್ದು ಈಗ ಮತ್ತೆ ಬಂಧನದಲ್ಲಿ ಸಿಲುಕಲೇ? ಹಾಗಾದರೆ ಇಷ್ಟು ದಿನ ಏಕೆ ಇವರು

ನನ್ನನ್ನು ಇಷ್ಟು ಕೀಳೆಂದು ಭಾವಿಸಿದ್ದರು? ನಾನು ಅವರ ಇಚ್ಛೆಯ ಮೇರೆಗೆ ನಡೆದರೆ ಇದರಲ್ಲಿ ನನ್ನದೇನು ತಪ್ಪು?' ಎಂದು ಯೋಚಿಸಿದೆ. ಆದರೆ ಅದನ್ನು ಅಸ್ವೀಕಾರ ಮಾಡಲಿಲ್ಲ. ಕೊನೆಗೆ ಕೇಳಿದೆ, "ಇಲ್ಲಿ ಏನು ತೊಂದರೆ ನಿಮಗೆ?"

ನಾನು ಅವರ ಸಂಪೂರ್ಣ ವಿಚಾರ ಅರಿಯಲಿಚ್ಛಿಸುತ್ತಿದ್ದೆ.

ನನ್ನ ಪತಿ ಮತ್ತೆ ಎದ್ದು ಕುಳಿತರು ಹಾಗೂ ಕಠೋರದೃಷ್ಟಿಯಿಂದ ನೋಡುತ್ತ, "ಈ ಪ್ರಶ್ನೆ ನನಗೆ ಕೇಳುವುದಕ್ಕಿಂತ ನಿನಗೇ ಕೇಳಿಕೋ. ಮೂರು ವರುಷಗಳ ಮೊದಲು ನನ್ನ ನಿನ್ನಲ್ಲಿದ್ದ ಮಾತುಕತೆಗೂ ಈಗಿರುವ ಮಾತು ಕತೆಗೂ ಇರುವ ಅಂತರವನ್ನು ತರ್ಕಿಸಲಾರೆಯಾ? ನಾನು ನಿನಗಿಂತ ಹೆಚ್ಚು ಕಲಿತವನಾಗಿದ್ದರೂ ನನಗೆ ಈ ಪರಂಪರೆಯ ಅನುಭವ, ರುಚಿ ಹೆಚ್ಚಾಗಿರುವ ಬದಲಾಗಿ ನಿನಗೇ ಹೆಚ್ಚಾಗಿದೆ. ನಾಲ್ಕು ವರುಷಗಳ ಹಿಂದೆ ನಾನು ಬೇನೆ ಯಿಂದ ಬಿದ್ದಿದ್ದರೆ ನೀನು ಮೊನ್ನೆ ಹೋದ ಹಾಗೆ ಹಾಗೆಯೇ ಹೋಗುತ್ತಿ-ದ್ದಿಯಾ? ಈಗ ನನಗೆ ನಿಜವಾಗಿ ಹೇಸಿಗೆ ಇಟ್ಟುಹೋಗಿದೆ. ನಿನ್ನ ಮನಸ್ಸು ಇಲ್ಲಿ ಇಲ್ಲ. ಆದರೂ ಕೇಳುವೆ, ಅಲ್ಲಿ ಹೋಗಲು ನಿನ್ನ ಸಮ್ಮತಿಯಿದೆಯೇ?

ನನಗೆ ವಜ್ರಾಘಾತವಾದಂತಾಯಿತು. ನನ್ನ ಪತಿಯ ಅಭಿಪ್ರಾಯ ಸಂಪೂರ್ಣವಾಗಿ ಹೃದಯಂಗಮವಾಯಿತು. ನನ್ನಲ್ಲಿ ಅಳಿದುಹೋದ ಲಜ್ಜೆ ಪುನರ್ಜೀವಿತವಾಯಿತು. ಮನಸ್ಸು ಒಡನುಡಿಯಿತು, 'ಅವಶ್ಯವಾಗಿ, ಮೊದ ಲಿದ್ದ ಶ್ಯಾಮಾ ಈಗ ಇಲ್ಲ. ಆಗ ನಾನು ಇವರನ್ನು ಇಷ್ಟದೇವನೆಂದು ಭಾವಿಸು ತ್ತಿದ್ದೆ. ಈಗ ಸಾಧಾರಣ ಮನುಷ್ಯರೆಂದು ಭಾವಿಸುತ್ತಿದ್ದೇನೆ. ಶ್ರೀ. ದಾಸ್‌ರ ಚಿತ್ರ ನನ್ನ ಕಣ್ಣ ಮುಂದೆ ಕಟ್ಟಿಹೋಗಿದೆ. ಆ ಸಭ್ಯಗೃಹಸ್ಥನ ಜೊತೆಗೆ ಒಡನಾಡಲು ನನ್ನ ಮನವಾದರೂ ಹೇಗೆ ಒಪ್ಪಿತು?'

ನನ್ನ ಪತಿಯ ಬಯಕೆ ಅವರ ಮುಖದಲ್ಲಿ ಒಡಮೂಡಿದ್ದಿತು. ಸ್ವಾರ್ಥ ಹಾಗೂ ವಿಲಾಸದ ಕಲ್ಪನೆಗಳು ಹೇಳಹೆಸರಿಲ್ಲದೆ ಹೋದವು. 'ನೀನು ಫ್ಯಾಶನ್ ಹಾಗೂ ಉಡುಪಿನಲ್ಲಿ ಬಹಳ ಉನ್ನತಿ ಪಡೆದಿರುವಿ. ನಿನ್ನಲ್ಲಿ ಸ್ವಾರ್ಥದ ಜ್ಞಾನ ಸಂಪೂರ್ಣವಾಗಿದೆ. ಅಲ್ಲದೆ ಜೀವನದಲ್ಲಿ ಸುಖ ಭೋಗಿಸುವ ಲಾಲಸೆ ಹೆಚ್ಚಾ ಗಿದೆ. ಅದರಿಂದ ನೀನು ಗರ್ವಿಷ್ಠಳಾಗಿರುವೆ. ಇದರಿಂದ ಆತ್ಮಿಕಬಲದ ವಿನಾಶವಾಗಿದೆ. 'ನೀನು ನಿನ್ನ ಕರ್ತವ್ಯವನ್ನು ಮರೆತಿರುವೆ.' ಎಂದು ಸ್ಪಷ್ಟ-ವಾದ ಅಕ್ಷರಗಳು ನನ್ನ ಕಣ್ಣು ಮುಂದೆ ನಿಂತಂತಾದವು.

ನಾನು ಎರಡೂ ಕೈಜೋಡಿಸಿ ನನ್ನ ಪತಿಯ ಚರಣಗಳ ಮೇಲೆ ಬಿದ್ದೆ. ಕುತ್ತಿಗೆಯ ಶಿರ ಉಬ್ಬಿತು; ಕಣ್ಣೀರು ಕೋಡಿಗಟ್ಟಿ ಹರಿಯಿತು.

ಈಗ ನಾನು ತಿರುಗಿ ನಮ್ಮ ಮನೆಗೆ ಬಂದಿದ್ದೇನೆ. ಈಗ ಅತ್ತೆ ಮೊದಲಿಗಿಂತ ಹೆಚ್ಚು ಸನ್ಮಾನದಿಂದ ನೋಡುತ್ತಾರೆ. ನನ್ನ ಪತಿ ದಿನಾಲು ಈಗ ಸಂಧ್ಯಾವಂದನೆ ಮಾಡುತ್ತಾರೆ.

—ಶ್ರೀಮತಿ ದಾಸ್‌ಳಿಂದ ಆಗಾಗ ಪತ್ರಗಳು ಬರುತ್ತವೆ. ಅವೆಲ್ಲ ಅಲಹಾಬಾದಿನ ಸೊಸಾಯಟಿಯ ಸಮಾಚಾರಗಳಿಂದ ತುಂಬಿರುತ್ತವೆ. ಶ್ರೀ. ದಾಸ್ ಶ್ರೀಮತಿ ಭಾಟಿಯಾ ಅವರ ಬಗ್ಗೆ ಕಲುಷಿತ ಮಾತು ಪ್ರಸಿದ್ಧವಾಗುತ್ತಿವೆ. ನಾನು ಪತ್ರಗಳಿಗೆ ಉತ್ತರ ಕೊಡುತ್ತೇನೆಂಬುದೇನೋ ನಿಜ. ಆದರೆ ಆ ಪತ್ರಗಳು ಬರದಿದ್ದರೆ ಚೆನ್ನಾಗುವುದೆಂದು ಭಾವಿಸುತ್ತೇನೆ. ಈಗ ನನಗೆ ಆ ದಿನಗಳ ನೆನಹು ಬಾಧಿಸುತ್ತದೆ. ಆದರೆ ಅದನ್ನು ಮರೆಯಲೆತ್ನಿಸುತ್ತೇನೆ.

ನಿನ್ನೆ ನನ್ನ ಪತಿ ಅನೇಕ ಪುಸ್ತಕಗಳನ್ನು ಸುಟ್ಟುಬಿಟ್ಟರು. ಅದರಲ್ಲಿ ಆಸ್ಕರ್ ವಾಯಿಲ್‌ಡನ ಅನೇಕ ಕೃತಿಗಳೂ ಇದ್ದವು. ಅವರೀಗ ಇಂಗ್ಲೀಷು ಪುಸ್ತಕ ಓದುವುದು ಕಡಿಮೆ. ಕಾರ್ಲಾಯಿಲ್, ರಸ್ಕಿನ್, ಎಮರಸನ್‌ರ ಕೃತಿಗಳನ್ನಷ್ಟೇ ಓದುತ್ತಾರೆ. ನನಗೀಗ ರಾಮಾಯಣ ಮಹಾಭಾರತಗಳಲ್ಲಿಯೇ ಅಭಿರುಚಿ ಉಂಟಾಗತೊಡಗಿದೆ. ಈಗ ಚರಖಾ ಹೆಚ್ಚಾಗಿ ತಿರುಗಿಸುತ್ತೇನೆ. ಏಕೆಂದರೆ ಅದೀಗ ಹೆಚ್ಚಾಗಿ ಪ್ರಚಾರಗೊಂಡಿದೆ.



# ಶಂಖನಾದ

## ೧

ಭಾನು ಚೌಧರಿ ತಮ್ಮ ಊರಿನ ಗೌಡರ ಕೆಲಸ ಮಾಡುತ್ತಿದ್ದರು. ಆ ಹಳ್ಳಿಯಲ್ಲಿ ಅವರಿಗೆ ಬಹಳ ಮಾನ ಸಲ್ಲುತ್ತಿದ್ದಿತು. ಜನರು ಅವರು ಮನೆಗೆ ಬಂದರೆ ಚಾಪೆಯ ಮೇಲೆ ಕಂಬಳಿ ಹಾಸದೆ ಕೂಡ್ರಿಸುತ್ತಿದ್ದಿಲ್ಲ. ಇವರ ಅಣತಿ ಯಿಲ್ಲದೆ ಒಂದು ತರಗೆಲೆಯೂ ಹಾರುತ್ತಿರಲಿಲ್ಲ. ಯಾವುದೇ ಜಗಳವಿದ್ದರೂ— ಅತ್ತೆ-ಸೊಸೆಯರ ಜಗಳವಿರಲಿ, ಹೊಲದ ವಿಷಯವಾಗಿ ಜಗಳವಿರಲಿ,—ಎಲ್ಲ ವನ್ನೂ ಚೌಧರಿಗಳೇ ನಿರ್ಣಯಿಸುತ್ತಿದ್ದರು, 'ಹೀಗೆ ಜಗಳವಾಗಿದೆ' ಎಂದು ತಿಳಿದೊಡನೆ ಅಲ್ಲಿಗೆ ಹೋಗಿ ಪರಿಸ್ಥಿತಿಯನ್ನು ತಿಳಿದುಕೊಂಡು, ಸಂಪೂರ್ಣ ವಿಚಾರಮಾಡಿ ತಮ್ಮ ನಿರ್ಣಯ ತಿಳಿಸುತ್ತಿದ್ದರು. ಜನರೂ ಅದನ್ನು ಮಾನ್ಯ ಮಾಡುತ್ತಿದ್ದರು. ಯಾರಿಗೂ ಕೋರ್ಟು ಕಟ್ಟೆ ಹತ್ತುವ ಆವಶ್ಯಕತೆಯೇ ಇರಲಿಲ್ಲ. ಇಂತಹ ವಿಚಾರಣೆಗೆ ಚೌಧರಿಗಳು ಅವಶ್ಯವಾಗಿ ಹಣ ಪಡೆಯು ತ್ತಿದ್ದರು. ಇದರಿಂದ ಚೌಧರಿಗಳ ವೈರಿಗಳು ಊರಲ್ಲಿ ಇದ್ದೂ ಇಲ್ಲದಂತಾಗಿ ದ್ದರು.

## ೨

ಚೌಧರಿಗಳಿಗೆ ಮೂವರು ಮಕ್ಕಳು. ಹಿರಿಯಮಗ ವಿತಾನ ಒಬ್ಬ ಸುಶಿಕ್ಷಿತ. ಅಂಚೆಕಟ್ಟೆಯಲ್ಲಿ ಕೆಲಸಮಾಡುತ್ತಿದ್ದ. ಅವನಿಗೆ ಅಪಾರವಾದ ಅನುಭವಜ್ಞಾನವಾಗಿತ್ತು; ಅಲ್ಲದೆ ನೀತಿಕುಶಲನೀತ. ಈತನಿಗೆ ಸಿಗರೇಟು ಸೇದುವ ವ್ಯಸನವಿದ್ದಿತು. ಈ ವ್ಯಸನ ಭಾನುಚೌಧರಿಗಳಿಗೆ ಸೇರದಿದ್ದರೂ ಅವರು ಸುಮ್ಮನಿರಬೇಕಾಗುತ್ತಿತ್ತು. ಏಕೆಂದರೆ ವಿತಾನ ಕಾನೂನು ಅಭ್ಯಾಸ

ಮಾಡಿದ್ದ ಅವನ ಬುದ್ಧಿ ಚುರುಕು. ಎರಡನೆಯ ಮಗ ಶಾಸ ಹೊಲ ಮನೆ ನೋಡಿಕೊಂಡಿದ್ದ. ಬುದ್ಧಿ ಅಷ್ಟೊಂದು ಚುರುಕಿಲ್ಲದಿದ್ದರೂ ಬಹಳ ಪರಿಶ್ರಮ ಜೀವಿಯಾಗಿದ್ದ. ಹುಲ್ಲು ದೊರೆಯದಿದ್ದರೆ, ಆಯಾಲು ದೊರಕಿಸುವವ! ಮೂರನೆಯ ಮಗ ಗುಮಾನ. ಈತ ಬಲು ರಸಿಕ. ಜಾತ್ರೆಯಲ್ಲಿ ಕಿವಿ ಗಡಚಿಕ್ಕಿ ಹೋಗುವ ಹಾಗೆ ನಗಾರಿ ಬಾರಿಸುತ್ತಿದ್ದ. ಮೀನ ಹಿಡಿಯುವುದು ಈತನಿಗೆ ಮೆಚ್ಚಿನ ವಿಷಯವಾಗಿದ್ದಿತು. ಈತ ತಾಳ ಬಾರಿಸಿ ಹಾಡತೊಡಗಿದರೆ ಅಲ್ಲಿಂದಲ್ಲಿ ಜನ ಕೂಡುತ್ತಿದ್ದರು. ಮೈಲುಮೈಲುಗಳ ವರೆಗೆ ಓಡುತ್ತಿದ್ದ. ಆದರೆ ಮನೆಯವರು ಅವನಿಗೆ ಯಾವ ಪರಿಯಿಂದಲೂ ಸಹಕಾರ ತೋರುತ್ತಿರಲಿಲ್ಲ.

ತಂದೆ, ಅಣ್ಣಂದಿರಂತೂ ಬೀಳುಭೂಮಿಯೆಂದೇ ತಿಳಿದಿದ್ದರು. ಅಂಜಿಕೆ, ಉಪದೇಶ, ಸ್ನೇಹ, ವಿನಯಗಳಿಂದ ಹೇಳಿ ನೋಡಿದರೂ ಆತ ಬಗ್ಗಲಿಲ್ಲ. ಆದರೆ ಅತ್ತಿಗೆಯರಿಬ್ಬರೂ ನಿರಾಶರಾಗಿರಲಿಲ್ಲ. ಗುಮಾನ ಆಲಸಿ. ಕೆಲಸ ಮಾಡಲಾಗುತ್ತಿರಲಿಲ್ಲ. ಅತ್ತಿಗೆಯ ಬೈಗುಳನ್ನು ಕೇಳದ ಅವನಿಗೆ ಒಂದು ದಿನವಿರಲಿಲ್ಲ. ಆ ವಿಷಯುಕ್ತ ಬಾಣಗಳು ಒಮ್ಮೊಮ್ಮೆ ಎದೆಯ ವರೆಗೂ ಮುಟ್ಟುತ್ತಿದ್ದವು. ಆದರೆ ಕೂಡಲೆ ಮತ್ತೆ ಗಾಯ ಮಾಯ್ದು ಹೋಗುತ್ತಿದ್ದಿತು.

ದಿನಾಲು ಮುಂಜಾವದಲ್ಲಿ ಎದ್ದು ಕೈಕಾಲುಮೋರೆ ತೊಳೆದುಕೊಂಡು ಕೊಳಲನ್ನೊಂದು ತೆಗೆದುಕೊಂಡು ಕೆರೆಯ ಕಡೆಗೆ ಹೋಗುತ್ತಿದ್ದ. ಎಲ್ಲರೂ ಬೈಗುಳ ಮಳೆ ಸುರಿಸುತ್ತಿದ್ದರು ಆದರೆ ಆತ ಯಾವುದನ್ನೂ ಕಿವಿಯ ಮೇಲೆ ಹಾಕಿಕೊಳ್ಳುತ್ತಲೇ ಇರಲಿಲ್ಲ. ಎಲ್ಲ ಮಾರ್ಗಗಳೂ ನಿಷ್ಫಲವಾದವು. ತಂದೆ ತಿಳಿಸಿಹೇಳುತ್ತಿದ್ದರು, "ಯಾವುದಾದರೂ ಕೆಲಸ ಹಿಡಿ, ನಾಲ್ಕು ದುಡ್ಡುಗಳಿಸಹತ್ತಿದರೆ ನಿನಗೂ ಅನುಕೂಲ, ನನಗೂ ಅನುಕೂಲ. ಅಣ್ಣಂದಿರ ಮೇಲೆ ಎಷ್ಟು ದಿನ ಕೈಯೂರಿ ಕುಳಿತುಕೊಂಡಿರುವೆ? ನಾನು ಹಣ್ಣೆಲೆಯಾಗಿದ್ದೇನೆ. ಇಂದು ಸಾಯುತ್ತೇನೆಯೋ ನಾಳೆ ಸಾಯುತ್ತೇನೆಯೋ ಯಾರು ಬಲ್ಲರು? ಅಣ್ಣಂದಿರು ಮಾತು ಕೇಳುವುದಿಲ್ಲ. ಅತ್ತಿಗೆಯರನ್ನಂತೂ ನೋಡುತ್ತಲೇ ಇದ್ದೀ. ನಿನಗೂ ಮಕ್ಕಳು ಮರಿಗಳಿವೆ. ಒಕ್ಕಲತನ ಮಾಡಲು ಮನಸ್ಸಿಲ್ಲ-ದಿದ್ದರೆ ಪೋಲಿಸ ಡಿಪಾರ್ಟಮೆಂಟಿನಲ್ಲಿ ಸೇರು." ಆದರೆ ಗುಮಾನ ಕಲ್ಲುದೇವತೆಗಿಂತ ಕಲ್ಲಾಗಿದ್ದ. ಈತನ ಈ ಆಲಸ್ಯದ ಫಲವನ್ನು ಇವನ ಮಡದಿ ಭೋಗಿಸ

ಬೇಕಾಗುತ್ತಿತ್ತು. ಮನೆಯಲ್ಲಿ ಪರಿಶ್ರಮದ ಕೆಲಸಗಳೆಲ್ಲ ಇವಳ ಪಾಲಿಗೇ. ಬೆರಣಿ ತಟ್ಟುವುದು, ಬಾವಿಯಿಂದ ನೀರು ತರುವುದು, ಜೋಳ ಬೀಸುವುದು ಮೊದಲಾದ ಕೆಲಸಗಳನ್ನು ಮಾಡಿಯೂ ಕೂಡ ಗುಮಾನನ ಅತ್ತಿಗೆಂದಿರ ಬೈಗಳು ತಪ್ಪುತ್ತಿರಲಿಲ್ಲ. ಅವಳೂ ಗುಮಾನನಿಗೆ ಉದ್ಯೋಗ ಕೈಕೊಳ್ಳುವಂತೆ ಸೂಚಿಸುತ್ತಿದ್ದಳು.

ಕೊನೆಗೊಮ್ಮೆ ಗುಮಾನ ತಂದೆಗೆ ಹೋಗಿ ಕೇಳಿಕೊಂಡ, "ನನಗೆ ಒಂದು ಅಂಗಡಿ ತೆಗೆದುಕೊಡಿರಿ." ಚೌಧರಿಗಳು ಪರಮಾತ್ಮನಿಗೆ ಧನ್ಯವಾದ ಗಳನ್ನರ್ಪಿಸಿದರು. ಅದರಂತೆ ಅಂಗಡಿ ತೆಗೆದು ಕೊಟ್ಟರು. ಗುಮಾನನಿಗೋ ಲಾಭವಾದರೂ ಅಷ್ಟೇ, ಆಗದಿದ್ದರೂ ಅಷ್ಟೇ. ಅಂಗಡಿಯೆಂದರೆ ನಾಲ್ಕೈದು ನಿರುದ್ಯೋಗಿಗಳೊಡನೆ ಹರಟೆಹೊಡೆಯುವ ಅಡ್ಡೆಯಾಗಿ ಪರಿಣಮಿಸಿತು.

ಕೊನೆಗೆ ಗೋಣಿಯ ತಟ್ಟಿನ ಹೊರತು ಏನೂ ಉಳಿಯದಷ್ಟು ಅಂಗ-ಡಿಯ ಅಭಿವೃದ್ಧಿಯಾಯಿತು. ಚೌಧರಿಗಳು ಬಾವಿ ಬೀಳಲು ಹೊರಟರು, ಅವನ ಅಣ್ಣಂದಿರು ಒದರಾಡತೊಡಗಿದರು, "ಅಯ್ಯೋ! ಮಕ್ಕಳು ಹರಕು ಚಿಂದಿ ಉಟ್ಟುಕೊಂಡು ಆಡ್ಡಾಡುತ್ತಿದ್ದರೆ, ಈತನಿಗೆ ಒಳ್ಳೊಳ್ಳೆಯ ಅಂಗಿಗಳು. ಇವನ ಅಂಗಡಿ ವಿಲಾಸಗೃಹವಾಗಿದೆ. ಈಗ ಹೊರಗೆ ಮೋರೆ ಕೂಡ ತೋರ ಲಾಗುವುದಿಲ್ಲ."

ಆದರೆ ಗುಮಾನನಿಗೆ ಯಾವುದೂ ಏನೂ ಅನಿಸಲಿಲ್ಲ. ಅವನು ಮತ್ತೆ ತನ್ನ ಪುರಾತನ ಕ್ರಮವನ್ನು ಪ್ರಾರಂಭಿಸಿದ. ವಿತಾನ ಬಹಳ ಸಿಟ್ಟಿಗೆದ್ದಿದ್ದ. 'ನಾನು ದಿನವೆಲ್ಲ ದುಡಿದರೂ ತೊಟ್ಟುಕೊಳ್ಳಲಾರದ ಅಂಗಿ ಈತ ತೊಟ್ಟು-ಕೊಳ್ಳುತ್ತಾನಲ್ಲ! ಇಂತಹ ಉಡುಪು ನನಗೆ ಮದುವೆಯಲ್ಲಿಯೂ ದೊರೆತಿರ ಲಿಲ್ಲ.' ಎಂದು ಯೋಚಿಸುತ್ತಿದ್ದ. ಶಾನನಿಗೂ ಇಂತಹ ಯೋಚನೆಗಳೇ ಬರುತ್ತಿದ್ದವು. ಕೊನೆಗೆ ಸಹಿಸಿ ಸಹಿಸಿ, ಸಹಿಸಲಸದಳವಾದಾಗ ವಿತಾನನ ಮಡದಿ ಗುಮಾನನ ಬಟ್ಟೆಗಳನ್ನು ತಂದು ಅವುಗಳ ಮೇಲೆ ಕಲ್ಲೆಣ್ಣೆ ಸುರಿವಿ ಉರಿಹಚ್ಚಿಬಿಟ್ಟಳು! ನೋಡುನೋಡುತ್ತಲೆ ಎಲ್ಲವೂ ಸುಟ್ಟು ಭಸ್ಮವಾದವು. ಗುಮಾನ ನೋಡಿ ಅಳುತ್ತಲಿದ್ದ. ಅವನ ಅಣ್ಣಂದಿರು ಮೋಜು ನೋಡುತ್ತ ನಿಂತಿದ್ದರು. ಭಾನುಚೌಧರಿಗಳು ಇದನ್ನು ನೋಡಿ ಹಣೆ ಗಟ್ಟಿಸಿಕೊಂಡರು, 'ಇದು ದ್ವೇಷಾಗ್ನಿ. ಮನೆ ಸುಟ್ಟಾಗಲೇ ಇದಕ್ಕೆ ಸಮಾಧಾನ.'

ಈ ಬೆಂಕಿ ತುಸು ಹೊತ್ತಿನಲ್ಲೇ ಶಾಂತವಾಯಿತು. ಆದರೆ ಹೃದಯದ ಬೆಂಕಿ ಹೆಚ್ಚುತ್ತಲೇ ಇದ್ದಿತು. ಕೊನೆಗೆ ಭಾನುಚೌಧರಿಗಳು ಈ ಸಂಕಟ ದಿಂದ ಪಾರಾಗುವುದಕ್ಕಾಗಿ ಮನೆಯ ಎಲ್ಲ ಜನರನ್ನು ಒತ್ತಟ್ಟಿಗೆ ಕೂಡಿಸಿ ವಿತಾನನಿಗೆ ಹೇಳಿದರು, "ಈಗ ಬರಿಯ ಮಾತಿಗಾಗಿ ನೂರಾರು ರೂಪಾಯಿ ಹಾಳಾದವು. ಇನ್ನು ಹೀಗೆಯೇ ಸಾಗುವುದು ಅಶಕ್ಯ. ನೀನು ಬುದ್ಧಿವಂತ, ಕಾನೂನು ಅಭ್ಯಾಸ ಮಾಡಿದವ, ಮನೆಯಲ್ಲಿಯ ಈ ಅಶಾಂತಿ ನಾಶವಾಗು ವಂತೆ ನೋಡಿಕೊಳ್ಳಲಾರೆಯಾ? ನಾನಿರುವ ವರೆಗಾದರೂ ಎಲ್ಲರೂ ಕೂಡಿಯೇ ಇರಬೇಕೆಂದೆನ್ನುತ್ತೇನೆ. ಆದರೆ ದೇವರ ಇಚ್ಛೆಯೊಂದಿದೆಯಲ್ಲ!"

ವಿತಾನ ನೀತಿಕುಶಲನಾದರೂ ಅವನ ಕುಶಲತೆ ಮಡದಿಯ ಮುಂದೆ ಅಡಗಿಹೋಗುತ್ತಿದ್ದಿತು ವಿತಾನ ಉತ್ತರ ಕೊಡಬೇಕೆಂದು ಯೋಚಿಸುತ್ತಿರು-ವಾಗಲೇ, ಅವನ ಮಡದಿ ನುಡಿದಳು, "ಮಾವನವರೇ! ಈಗ ಯೋಚಿಸುವು ದರಿಂದೇನು ಪ್ರಯೋಜನ? ಸಹಿಸಿ ಸಹಿಸಿ ಹೃದಯ ಬೆಂದುಹೋಗಿದೆ. ಮಗನ ಬಗ್ಗೆ ತಂದೆಗಿರುವಷ್ಟು ದಕ್ಷತೆ ಅಣ್ಣಂದಿರಿಗೇತಕ್ಕೆ? 'ಗಳಿಸಿದಷ್ಟು ಹಣ ಗುಮಾ ನನಿಗೇ ಆಯಿತು. ಬೇಕಾದರೆ ಬಂಗಾರದ ಮನೆ ಕಟ್ಟಿಸಿಕೊಡಿರಿ. ನಮಗೆ ಇಷ್ಟು ಸಹಾನುಭೂತಿಯಿಲ್ಲ. ನಾವು ನಮ್ಮ ಗುಡಿಸಲು ಬೇರೆ ಕಟ್ಟಿಕೊಳ್ಳು-ತ್ತೇವೆ. ನಮ್ಮ ಪಾಲನ್ನು ನಮಗೆ ಕೊಟ್ಟು ಬಿಡಿರಿ. ನಾಲ್ಕು ಜನ ನಕ್ಕರೂ ಸಹಿಸಿಯೇವು."

ನೀತಿಜ್ಞ ವಿತಾನನ ಮೇಲೆ ಈ ಭಾಷಣದ ಪ್ರಭಾವ ಸಾಕಷ್ಟು ಆಯಿತು. ತಾನು ಸ್ಪಷ್ಟಪಡಿಸಲಾರದುದನ್ನು ತನ್ನ ಮಡದಿ ಸ್ಪಷ್ಟಪಡಿಸಿದುದನ್ನು ನೋಡಿ ವಿತಾನನಿಗೆ ಅತ್ಯಂತ ಆನಂದವಾಯಿತು. ನೀತಿಜ್ಞ ನುಡಿದ, "ಹೀಗೆ ಭಾಗ ಮಾಡಿಕೊಟ್ಟುಬಿಟ್ಟರೆ ನಮಗೂ ಅನುಕೂಲ, ನಿಮಗೂ ಅನುಕೂಲ. ಅಷ್ಟು ಮಾಡುವುದೇ ಒಳ್ಳೆಯ ಉಪಾಯ."

ಈಗ ಮಂದಬುದ್ಧಿಯ ಶಾನನ ಸರತಿ ಬಂದಿತು. ಎತ್ತಿನ ಹಿಂದಿನಿಂದ ಹೋಗುವ ಆ ಮಹಾಶಯ ಇಂತಹ ತೀಕ್ಷ್ಣ ವಿಚಾರಗಳ ಬಗ್ಗೆ ಏನು ತಾನೇ

ಹೇಳಿಯಾನು? ಅವನು ಉಭಯಸಂಕಟಕ್ಕೆ ಸಿಲುಕಿದ. ಅವನ ಹಂಡತಿ ತಾನೇ ಹೇಳಿದಳು, "ನನ್ನ ಅಕ್ಕ ಹೇಳಿದುದೇ ಸರಿಯಾದುದು. ಅದರ ಹೊರತು ಬೇರೆ ಉಪಾಯವಿಲ್ಲ. ದುಡಿಯುವವರೊಬ್ಬರು, ಕುಳಿತು ಉಣ್ಣುವವರೊಬ್ಬರು. ಈ ಕತ್ತಲೆಯ ರಾಜ್ಯ ಇನ್ನು ಸಾಗಲಾರದು." ಶಾನ ಚೌಧರಿಯೂ ಇದಕ್ಕೆ ಒಪ್ಪಿದ. ಭಾನು ಚೌಧರಿ ಹೇಳಿದರು, "ಗುಮಾಸ್ತ, ಇದಕ್ಕೆ ನಿನ್ನ ಒಪ್ಪಿಗೆ ಇದೆಯಲ್ಲವೆ? ಈಗೇನೂ ಕೆಡುಕಾಗಿಲ್ಲ. ಆ ಬೆಂಕಿ ಆರಬಹುದು. ಈಗ ಹೇಳು, ಏನಾದರೂ ಕೆಲಸ ಮಾಡುವೆಯೋ ಇಲ್ಲವೆ ಹಾಗೆಯೇ ಬಿದ್ದುಕೊಂಡಿರು-ವೆಯೋ?"

ಗುಮಾಸ್ತನಲ್ಲೇನೂ ಕಡಿಮೆ ಧೈರ್ಯ ಇರಲಿಲ್ಲ. ಇಂತಹ ಶಬ್ದ ಕೇಳಿ ಅವನಿಗೆ ಅಭ್ಯಾಸವಾಗಿಬಿಟ್ಟಿದ್ದಿತು. ಹೇಳಿದ, "ಅಣ್ಣಂದಿರೇ, ತಮ್ಮ ಇಚ್ಛೆ ನನಗೆ ಶಿರಸಾಮಾನ್ಯ. ನನಗೂ ಈ ಜಂಜಡದಿಂದ ಪಾರಾದರೆ ಸಾಕಾಗಿ ಹೋಗಿದೆ. ನನ್ನ ಹಣೆಬರಹದಲ್ಲಿ ಸಾಯುವಂತೆ ದುಡಿಯುವುದು ಬರೆದಿಲ್ಲ; ಸಂಪೂರ್ಣ ವಿಲಾಸಿಯಾಗಿರುವುದನ್ನು ಬರೆದಂತೆ ತೋರುತ್ತದೆ. ಹಾಗಾದರೆ ನಾನೇಕೆ ದುಡಿಯಬೇಕು? ನಾನು ಯಾರಿಗೂ ದುಡಿಯಲು ಹೇಳುವುದಿಲ್ಲ. ಅಂದಬಳಿಕ ನೀವಾದರೂ ಏತಕ್ಕೆ ದುಡಿಯುವಿರಿ?"

ಹೀಗೆ ಎಷ್ಟೋ ಬಾರಿ ಸಭೆಗಳಾಗುತ್ತಿದ್ದವು. ಆದರೆ ಈ ದೇಶದ ರಾಜಕೀಯ ಸಭೆಗಳ ನಿರ್ಣಯ ನಿಷ್ಫಲವಾಗುವಂತೆ ಅವರ ಸಭೆಗಳೂ ನಿಷ್ಫಲ ವಾಗುತ್ತಿದ್ದವು. ಎರಡು ಮೂರು ದಿನಗಳ ವರೆಗೆ ಗುಮಾಸ್ತ ಮನೆಯಲ್ಲಿ ಊಟ ಮಾಡಲೇ ಇಲ್ಲ. ಜತನಸಿಂಗ್ ಠಾಕೂರರ ಮನೆಯಲ್ಲಿ ಉಂಡು ಅಲ್ಲಿಯೇ ಬಿದ್ದುಕೊಂಡಿರುತ್ತಿದ್ದ. ಕೊನೆಗೆ ಭಾನುಚೌಧರಿಗಳು ತಾವೇ ತಿಳಿಸಿಹೇಳಿ, ಕರೆದುಕೊಂಡು ಬಂದರು. ಮತ್ತೆ ಮೊದಲಿನಂತೆ ಕ್ರಮ ನಡೆಯಿತು.

೬

ಪಂಡಿತರ ಮನೆಯಲ್ಲಿಯ ಇಲಿಗಳಂತೆ, ಭಾನುಚೌಧರಿಗಳ ಮನೆಯಲ್ಲಿ ಚಿಕ್ಕ ಮಕ್ಕಳು ಹೇರಳವಾಗಿದ್ದರು. ಅವರಿಗೋಸುಗ ಮಣ್ಣಿನ ಕುದುರೆ, ಕಟ್ಟಿಗೆಯ ಕಾಗದದ ನಾವೆಗಳು ಮನೆಯಲ್ಲಿ ಅತ್ತಿತ್ತ ಬಿದ್ದುಕೊಂಡಿರುತ್ತಿ-ದ್ದವು ಅಲ್ಲದೆ ದಿನಾಲು ಹಣ್ಣುಗಳ ವ್ಯಾಪಾರವಂತೂ ಆಗಲೇಬೇಕು.

ಹಣ್ಣಿನವ ವಾರಕ್ಕೊಮ್ಮೆ ಬರುತ್ತಿದ್ದ. ಅವನನ್ನು ನೋಡಿ ಹುಡುಗರು ಮುನ್ನುಗ್ಗುತ್ತಿದ್ದರು. ಹಣ್ಣಿನವ ಒಬ್ಬ ಕುರೂಪಿ ಮುದುಕನಾಗಿದ್ದ. ಆದರೂ ಅವನ ಸ್ವರದಲ್ಲಿ ಆಕರ್ಷಕತೆಯಿದ್ದಿತು. ಆತ ಜೊತೆಗೆ ಮಿಠಾಯಿಗಳನ್ನೂ ತರುತ್ತಿದ್ದ. ಹುಡುಗರು ಮಿಠಾಯಿ ಬೇಕೆನ್ನುತ್ತಿದ್ದರೆ, ತಾಯಿಯ ಬಳಿ ಹಣ ವಿಲ್ಲದಿದ್ದರೆ ಆತ ಹುಡುಗರಿಗೆ ಮಿಠಾಯಿ ಕೊಟ್ಟು ಸ್ನೇಹಪೂರ್ಣಭಾವದಿಂದ ತಾಯಂದಿರಿಗೆ ಹೇಳುತ್ತಿದ್ದ, "ಅಮ್ಮಾ ಈಗ ಹಣವಿಲ್ಲದಿದ್ದರೆ ಬಳಿಕ ಹಣ ಕೊಡಿರಿ. ಯಾರೂ ಓಡಿಹೋಗುವುದಿಲ್ಲ. ದೇವರು ನಿಮಗೆ ಮಕ್ಕಳನ್ನು ದಯಪಾಲಿಸಿದ್ದಾನೆ. ನನಗೆ ಅಷ್ಟನ್ನೂ ಮಾಡಲಾಗದೇ?"

'ಕಡವಿಲ್ಲ' ಎಂಬ ಹಲಿಗೆ ಹಣ್ಣು ಮಾರುವವನ ದೃಷ್ಟಿಯಲ್ಲಿ ಅನ್ಯಾಯ ವಾಗಿದ್ದಿತು. ಈ ತರಹದ ವ್ಯವಹಾರದಿಂದ ಆತ ತಾಯಂದಿರ ಮಮತೆ ಗಳಿಸುತ್ತಿದ್ದ.

ಒಂದು ಹಬ್ಬದ ದಿನ ಮಕ್ಕಳೆಲ್ಲ ಹಣ್ಣು ಮಾರುವವನ ಮಾರ್ಗಪ್ರತೀ-ಕ್ಷಿಸುತ್ತಲಿದ್ದರು. ಕೆಲ ಹುಡುಗರು ಜಿಗಿದಾಡುತ್ತಲಿದ್ದರು. ಅಂದು ಸಂಜೆಗೆ ಹಣ್ಣು ಮಾರುವವ ಬಂದ. ಮಕ್ಕಳೆಲ್ಲ ಆತನನ್ನು ಮುತ್ತಿಬಿಟ್ಟರು. 'ನಮ್ಮ ಮನೆಗೆ, ನಮ್ಮ ಮನೆಗೆ' ಎಂದು ಎಲ್ಲರೂ ಕೈಹಿಡಿದು ಎಳೆಯತೊಡಗಿದರು. ಸಮೀಪದಲ್ಲಿ ಭಾನುಚೌಧರಿಗಳ ಮನೆಯಿದ್ದಿತು. ಆತ ತನ್ನ ಬುಟ್ಟಿ ಇಳಿಸಿದ. ಮಿಠಾಯಿ 'ಲೂಟಿ' ಪ್ರಾರಂಭವಾಯಿತು. ಹುಡುಗರು ತಾಯಂದಿರನ್ನು ಪೀಡಿಸ ತೊಡಗಿದರು. ವಿಠಾನನ ಹೆಂಡತಿ ತನ್ನ ಮೂರು ಮಕ್ಕಳಿಗೆ ಆಗುವಷ್ಟು ತಿಂಡಿ ತೆಗೆದುಕೊಂಡಳು. ಶಾನನ ಹೆಂಡತಿ ತನ್ನ ಎರಡು ಮಕ್ಕಳಿಗೆ ಮಿಠಾಯಿ ತೆಗೆದು-ಕೊಂಡಳು. ಹಣ್ಣು ಮಾರುವವನೂ ತನ್ನ ಸಿಹಿ ಮಾತುಗಳನ್ನು ಪ್ರಾರಂಭಿಸಿದ. ಹುಡುಗರು ಕುಣಿಯುತ್ತ ಓಡಿದರು. ಆತನಿಂದ ಮಿಠಾಯಿ ಕೊಳ್ಳದೆ ಉಳಿದವನೆಂದರೆ ಗುಮಾನನ ಮಗ ಧಾನನೊಬ್ಬನೇ.

ಧಾನನಿಗೆ ತನ್ನ ದಾಯಾದಿಗಳು ತಿಂಡಿ ತಿನ್ನುವುದನ್ನು ನೋಡಿ ಸಹಿಸಲಾಗಲಿಲ್ಲ. ಅವರಂತೂ ಈತನಿಗೆ ತಿಂಡಿ ತೋರಿಸಿ ಅಣಕಿಸಿ ತಿನ್ನುತ್ತಿದ್ದರು. ಧಾನ ಇದೆಲ್ಲವನ್ನು ನೋಡಿ ತಾನೂ ತನ್ನ ತಾಯಿಯನ್ನು ಬಾಗಿಲ ಕಡೆಗೆ ಎಳೆಯುತೊಡಗಿದ. ಆದರೆ ಹೆಣ್ಣುಮಗಳು, ಪಾಪ, ಏನು ತಾನೇ ಮಾಡಿ

ಯಾಳು? ಅವಳ ಹತ್ತಿರ ಹಣವಂತೂ ಇರಲೇ ಇಲ್ಲ. ಅವಳಿಗೆ ತನ್ನ ದುರ್ದೈವದ ಮೇಲೆ, ಗುಮಾನನ ಅತ್ತಿಗೆಯಂದಿರ ದ್ವೇಷದ ಮೇಲೆ, ಇವೆಲ್ಲವುಗಳನ್ನು ಮೀರಿ ತನ್ನ ಪತಿಯ ನಿರುದ್ಯೋಗತನದ ಮೇಲೆ ಬಂದ ಸಿಟ್ಟಿಗೆ ಎಲ್ಲೆ ಉಳಿಯಲಿಲ್ಲ. 'ತನ್ನ ಪತಿ ಈಗಿನಂತಿರದೆ ಹೋಗಿದ್ದರೆ ಇಂತಹ ದ್ವೇಷವೆಲ್ಲಿ ಹುಟ್ಟುತ್ತಿದ್ದಿತು?' ಎಂದು ಯೋಚಿಸಿದಳು. ಬಳಿಕ ಅಳುತ್ತಿರುವ ಹುಡುಗನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಸಮಾಧಾನಪಡಿಸತೊಡಗಿದಳು, "ಮಗು, ಅಳ-ಬೇಡ. ನಾಳೆ ಬಹಳ ಮಿಠಾಯಿ ತಂದುಕೊಡುವೆ. ಇಂತಹ ಹಬ್ಬ ಮತ್ತೊಮ್ಮೆ ಬರುವುದು, ಆಗ ಬೇಕಾದಷ್ಟು ಮಿಠಾಯಿ ತಿನ್ನುವೆಯಂತೆ." ಇದನ್ನು ಹೇಳು ತ್ತಿದ್ದ ಹಾಗೆಯೇ ಅವಳ ಕಣ್ಣುಗಳಲ್ಲಿ ನೀರೂರಿದವು. 'ನನ್ನ ಮಗ ಮಿಠಾಯಿ ಗಾಗಿ ಇಷ್ಟು ಅಳುತ್ತಿರುವುದನ್ನು ನೋಡಿ ಕೂಡ ಇವರ ಕಲ್ಲೆದೆ ಕರಗಲಿಲ್ಲ-ವಲ್ಲ!' ಎಂದು ಹಳಹಳಿಸಿದಳು. ಆದರೆ ಧಾನ ಅಳುತ್ತಲೇ ಇದ್ದ. ಬಳಿಕ ಎದ್ದು, ನೆಲದ ಮೇಲೆ ಹೊರಳಾಡಿ ಅಳತೊಡಗಿದ. ತಾಯಿ ಬಹಳ ತಿಳಿಸಿ ಹೇಳಿದಳು, ಕೊನೆಗೆ ಸಿಟ್ಟು ಬಂದಿತು. ಎರಡು ಹೊಡೆದು ಹೇಳಿದಳು, "ಸುಮ್ಮನಾಗು, ದುರ್ದೈವಿ! ತನ್ನ ದೈವಕ್ಕಾಗಿ ಅಳುವುದಿಲ್ಲ, ಮಿಠಾಯಿಗಾಗಿ ಅಳುತ್ತಾನೆ."

ಕಲ್ಲಿನಲ್ಲಿ ಜೇಂಕಿ ಅಡಗಿರುವಂತೆ ಎಂತಹ ಕಠೋರ ಮನುಷ್ಯನ ಹೃದಯ ದಲ್ಲಿ ಕೂಡ ಕರುಣೆ ಅಡಗಿರುತ್ತದೆಂಬುದು ಸುಳ್ಳಲ್ಲ.

ಗುಮಾನ ಇದನ್ನೆಲ್ಲ ನೋಡುತ್ತಲಿದ್ದ, ಅವನ ಕಣ್ಣಿಂದ ಕಂಬನಿ ಎಡೆ-ಬಿಡದೆ ಸುರಿಯಿತು, ಹೃದಯದ ಮಲಿನತೆಯನ್ನು ತೊಳೆಯಿತು.

ಗುಮಾನ ಕೂಡಲೆ ಎದ್ದು ಹೋಗಿ ಮಗನನ್ನೆತ್ತಿಕೊಂಡು ಕರುಣೋತ್ಪಾದಕ ಸ್ವರದಿಂದ ಮಡದಿಗೆ ಹೇಳಿದ, "ಮಗನ ಮೇಲೆ ಏತಕ್ಕೆ ಇಷ್ಟು ಕೋಪ? ಇದಕ್ಕೆ ನಾನೇ ದೋಷಿ; ನನ್ನನ್ನೇ ದಂಡಿಸು. ದೇವರ ಇಚ್ಛೆಯಾದರೆ, ನಾಳೆ ಈ ಮನೆಯಲ್ಲಿಯೇ ನಮಗೆ ಮಾನ ದೊರೆದೀತು. ನೀನು ನನ್ನನ್ನು ಇಂದು ಚೆನ್ನಾಗಿ ಎಚ್ಚರಿಸಿರುವೆ. ಈ ನಿನ್ನ ಶಂಖನಾದ ಕರ್ತವ್ಯಪಥವನ್ನು ತಪ್ಪಿ ನಡೆದ ನನ್ನನ್ನು ಮತ್ತೆ ಕರ್ತವ್ಯಪಥದಲ್ಲಿ ಹೆಜ್ಜೆಯಿರಿಸುವಂತೆ ಮಾಡಿದೆ."

---

# ಡಿಕ್ರಿಯ ರೂಪಾಯಿಗಳು

## ೧

ನಯೀಮ ಹಾಗೂ ಕೈಲಾಸರಲ್ಲಿ ಎರಡು ಜಾತಿಯ ಪ್ರಾಣಿಗಳಲ್ಲಿರುವಷ್ಟು ಶಾರೀರಿಕ, ಮಾನಸಿಕ, ಸಾಮಾಜಿಕ ಹಾಗೂ ನೈತಿಕ ಭಿನ್ನತೆಯಿದ್ದಿತು. ನಯೀಮ ಹರವಾದ ಎದೆಯ ಅಜಾನುಬಾಹುವಾಗಿದ್ದರೆ, ಕೈಲಾಸ ಒಂದು ಕಂಟಿಯಂತೆ ತೆಳ್ಳಗೆ ಬೆಳ್ಳಗಿದ್ದ. ನಯೀಮನಿಗೆ ಕ್ರಿಕೆಟ್ ಫುಟ್‌ಬಾಲ್ ಆಟಗಳಲ್ಲಿ, ತಿರುಗಾಟ ಬೇಟೆಗಳಲ್ಲಿ ಆಸಕ್ತಿಯಿದ್ದರೆ, ಕೈಲಾಸನಿಗೆ ಪುಸ್ತಕದಲ್ಲಿ ಆಸಕ್ತಿ. ನಯೀಮ ಒಬ್ಬ ವಿನೋದಿ, ವಾಕ್ಚತುರ, ಹಾಸ್ಯಪ್ರಿಯ ಯುವಕನಾಗಿದ್ದ. ಆತನಿಗೆ ನಾಳೆಯ ಚಿಂತೆ ಎಂದಿಗೂ ಕಾಡುತ್ತಿರಲಿಲ್ಲ ಶಾಲೆ ಆವನಿಗೆ ಆಟದ ಮನೆಯಾಗಿತ್ತು; ಒಮ್ಮೊಮ್ಮೆ ಬೆಂಚಿನ ಮೇಲೆ ನಿಲ್ಲುವ ಶಿಕ್ಷೆಯ ಸೆರೆಮನೆಯೂ ಆಗಿದ್ದಿತು. ಆದಕ್ಕೆ ವಿರುದ್ಧವಾಗಿ ಕೈಲಾಸ ಏಕಾಂತಪ್ರಿಯ, ಸೋಮಾರಿ, ವ್ಯಾಯಾಮಕ್ಕೆ ಹೆದರುವ, ಅರಸಿಕ, ಚಿಂತಾಶೀಲ ಆದರ್ಶವಾದಿಯಾಗಿದ್ದ. ನಯೀಮ ಸುಸಂಪನ್ನ ಸಿರಿವಂತ ಅಧಿಕಾರಿಯೊಬ್ಬನ ಏಕಮಾತ್ರ ಪುತ್ರನಾಗಿದ್ದ. ಕೈಲಾಸ ಸಾಧಾರಣ ವ್ಯವಸಾಯಿಯೊಬ್ಬನ ಅನೇಕ ಮಕ್ಕಳಲ್ಲಿ ಒಬ್ಬನಾಗಿದ್ದ. ಆತನಿಗೆ ಪುಸ್ತಕಗಳಿಗೋಸುಗ ಸಾಕಷ್ಟು ಹಣ ಸಿಗುತ್ತಿದ್ದಿಲ್ಲವಾದ್ದರಿಂದ ಬೇಡಿಕೊಂಡು ಪುಸ್ತಕ ಸಂಪಾದಿಸಿಕೊಳ್ಳುತ್ತಿದ್ದ. ಒಬ್ಬನಿಗೆ ಜೀವನವು ಅರಮನೆಯಂತೆ ಕಾಣುತ್ತಿದ್ದರೆ ಇನ್ನೊಬ್ಬನಿಗೆ ಸೆರೆಮನೆಯಂತೆ ಕಾಣುತ್ತಿತ್ತು.

ಆದರೆ ಇಷ್ಟು ವಿಷಮತೆಗಳು ಉತ್ಪನ್ನವಾಗಿದ್ದರೂ ಕೂಡ ಅವರಿಬ್ಬರಲ್ಲಿ ಗಾಢವಾದ ಸ್ನೇಹ ಬೆಳೆದುಕೊಂಡು ಬಂದಿದ್ದಿತು. ನಯೀಮನ ಉಪದೇಶದಿಂದ ಒಮ್ಮೊಮ್ಮೆ ಕೈಲಾಸನೂ ಗಾಳಿಸೇವನೆಗೆ ಹೋಗುತ್ತಿದ್ದ. ಕೈಲಾಸನ ಇಚ್ಛೆಯ ಮೇರೆಗೆ ಒಮ್ಮೊಮ್ಮೆ ನಯೀಮ ಭವಿಷ್ಯ ಸ್ವಪ್ನವನ್ನು ನೋಡುತ್ತಿದ್ದ. ನಯೀಮನಿಗೆ ನೌಕರಿ ಕಾಯ್ದುಕೊಂಡಿದ್ದಿತು. ಆದರೆ ಕೈಲಾಸನಿಗೆ ತನ್ನ

ಕೈಗಳಿಂದಲೇ ಬಾವಿ ಅಗೆದು ನೀರು ಕುಡಿಯಬೇಕಾಗಿದ್ದಿತು; ಆತನಿಗೆ ಭವಿಷ್ಯ ಒಂದು ಭೀಷಣ ಸಂಗ್ರಾಮವಾಗಿದ್ದಿತು.

೨

ಕಾಲೇಜಿನಿಂದ ಹೊರಗೆ ಕಾಲಿಟ್ಟೊಡನೆ, ಮೂರನೆಯ ತರಗತಿಯಲ್ಲಿ ತೇರ್ಗಡೆ ಹೊಂದಿದ್ದರೂ ಕೂಡ ನಯೀಮನಿಗೆ ಶಾಸನ ವಿಭಾಗದಲ್ಲಿ ಒಂದು ಉಚ್ಚಪದ ದೊರೆಯಿತು. ಕೈಲಾಸ ಒಂದನೆಯ ತರಗತಿಯಲ್ಲಿ ತೇರ್ಗಡೆ ಹೊಂದಿದ್ದರೂ ಕೂಡ ಆತನಿಗೆ ಒಂದೂ ನೌಕರಿ ದೊರೆಯಲಿಲ್ಲ. ಕೊನೆಗೆ ಆತ ತನ್ನ ಲೇಖನಕಲೆಯನ್ನೇ ಅವಲಂಬಿಸಬೇಕಾಯಿತು; ಆತ ಒಂದು ವೃತ್ತ-ಪತ್ರಿಕೆ ಹೊರಡಿಸಿದ. ಒಬ್ಬ ರಾಜ್ಯಾಧಿಕಾರದಿಂದ ಹಣ ಗಳಿಸುತ್ತಿದ್ದರೆ ಇನ್ನೊಬ್ಬ ಸೇವಾಮಾರ್ಗದಿಂದ ಖ್ಯಾತಿಗಳಿಸುತ್ತಿದ್ದ.

ನಯೀಮ ದೊಡ್ಡ ಮನೆಯಲ್ಲಿರುತ್ತಿದ್ದರೂ, ಮೋಟರುಕಾರಿನಲ್ಲಿ ಓಡಾಡುತ್ತಿದ್ದರೂ, ಅಷ್ಟೇ ಏಕೆ, ಬೇಸಿಗೆಯಲ್ಲಿ ನೈನಿತಾಲಿಗೆ ಹೋಗುತ್ತಿದ್ದರೂ ಆತನನ್ನು ಜನರು ಗುರುತಿಸುತ್ತಿರಲಿಲ್ಲ. ಕೈಲಾಸನನ್ನು ಚಿಕ್ಕ ಮಕ್ಕಳು ಮೊದಲಾಗಿ ಎಲ್ಲರೂ ಗುರುತಿಸುತ್ತಿದ್ದರು. ಒಂದು ಗುಡಿಸಲು ಅವನ ವಾಸ ಸ್ಥಾನವಾಗಿತ್ತು.

ಕೈಲಾಸನಿಗೆ ತನ್ನ ಮಕ್ಕಳಿಗೆ ಸಾಕಾಗುವಷ್ಟು ಹಾಲು, ಮನೆಗೆ ಸಾಕಾಗುವಷ್ಟು ತರಕಾರಿ ಕೂಡ ದೊರೆಯುತ್ತಿರಲಿಲ್ಲ. ನಯೀಮನಿಗೆ ಪುತ್ರ ರತ್ನವೊಂದೇ ಜನಿತವಾಗಿತ್ತು. ಆದರೆ ಕೈಲಾಸ ಅನೇಕ ಮಕ್ಕಳ ತಂದೆ ಯಾಗಿದ್ದ.

ನೇಹಿಗರಿಬ್ಬರಲ್ಲೂ ಪತ್ರವ್ಯವಹಾರವಾಗುತ್ತಿದ್ದಿತು; ಒಮ್ಮೊಮ್ಮೆ ಬೆಟ್ಟಿಯೂ ಆಗುತ್ತಿದ್ದಿತು. ಆಗ ನಯೀಮ ಹೇಳುತ್ತಿದ್ದ, “ನಿನ್ನ ಜೀವನದಲ್ಲಿಯೇ ಸುಖ ವಿದೆ. ನೀನು ದೇಶದ ಸೇವೆಯನ್ನಾದರೂ ಮಾಡುತ್ತೀ. ಆದರೆ ನನಗೆ ಹೊಟ್ಟೆಯ ಪೂಜೆಯನ್ನುಳಿದು ಇನ್ನಾವ ಪೂಜೆಯೂ ಇಲ್ಲ.” ನಯೀಮ ದೇಶ

ಶೀಘ್ರವೇಗಾಗಿ ಅನೇಕ ಸಂಧಿಗಳನ್ನು ಅರಸಿದ್ದ. ಆದರೆ ಅವು ಆತನಿಗೆ ಸಾಧ್ಯವಿರಲಿಲ್ಲ. ಅಷ್ಟೆ.

ಕೈಲಾಸನಿಗೆ ಇದೆಲ್ಲ ನಯೀಮನ ವಿನಯಶೀಲತೆ ಎಂದೆನಿಸುತ್ತಿತ್ತು. ನನ್ನ ಈ ಹೀನ ದಶೆಯನ್ನು ನೋಡಿ ಸಮಾಧಾನ ಮಾಡುವುದಕ್ಕಾಗಿ ಈ ರೀತಿಯಾಗಿ ಮಾತನಾಡುತ್ತಾನೆಂದೇ ಕೈಲಾಸ ಭಾವಿಸಿದ್ದ. ಆದುದರಿಂದ ನಯೀಮನೆದುರು ತನ್ನ ಬಡತನವನ್ನು ಮುಚ್ಚಿಡಲು ಕೈಲಾಸ ಬಹಳ ಪ್ರಯತ್ನಮಾಡುತ್ತಿದ್ದ. ದುರ್ದೈವದಿಂದ ಅವು ವಿಫಲವಾಗುತ್ತಿದ್ದವು.

× × × ×

ವಿಷ್ಣುಪುರ ಸಂಸ್ಥಾನದಲ್ಲಿ ಹಾಹಾಕಾರವೆದ್ದುಹೋಗಿದ್ದಿತು. ಸಂಸ್ಥಾನದ ಮ್ಯಾನೇಜರರ ಕೊಲೆ ಉರಿಬಿಸಿಲಲ್ಲಿ, ಮಧ್ಯಾಹ್ನದ ಎರಡು ಗಂಟೆಗೆ ಸರಿಯಾಗಿ ನಡೆದುಹೋಯಿತು. ಕೊಲೆಗಾರ ಓಡಿಹೋಗಿದ್ದ ಆದರೂ ಅಧಿಕಾರಿಗಳಿಗೆ ಯುವರಾಜರ ಪ್ರೇರಣೆಯಿಂದ ಈ ಕೊಲೆ ಘಟಿಸಿತೆಂದು ಎನಿಸಿತು. ಯುವರಾಜರಿಗೆ ವಯಸ್ಸು ತುಂಬಿರದ್ದರಿಂದ ವಿಷ್ಣುಪುರದ ರಾಜ್ಯಭಾಡಳಿತೆ ಕೋರ್ಟ್ ಆಫ್ ವಾರ್ಡ್ಸ್ ಮೂಲಕ ನಡೆಯುತ್ತಿದ್ದಿತು.

ಮ್ಯಾನೇಜರರು ಯುವರಾಜರನ್ನು ನೋಡಿಕೊಳ್ಳುವುದೂ ಒಂದು ಅವಶ್ಯವಾದ ಕೆಲಸವಾಗಿದ್ದಿತು; ಅವರು ಅದರಂತೆ ನೋಡಿಕೊಳ್ಳುತ್ತಲೇ ಇದ್ದರು. ಯುವರಾಜರಿಗೆ ವಿಲಾಸಕ್ಕೆ ಎಡೆ ದೊರೆಯದಾಯಿತು. ಹೀಗಾಗಿ ಯುವರಾಜರಲ್ಲೂ ಮ್ಯಾನೇಜರರಲ್ಲೂ ತಿಕ್ಕಾಟ ನಡೆದೇ ನಡೆಯುತ್ತಿದ್ದಿತು. ಯುವರಾಜರ ಮೇಲೆ ಸಂದೇಹ ಅಷ್ಟೊಂದು ನಿರಾಧಾರವೆಂದು ಹೇಳಲಾಗದು.

ಈ ಪ್ರಕರಣದ ನಿರ್ಣಯಕ್ಕಾಗಿ ನಯೀಮ ನಿಯಮಿಸಲ್ಪಟ್ಟ. ನಯೀಮನಿಗೆ ತನ್ನ ಭಾಗ್ಯನಿರ್ಮಾಣದ ಸ್ವರ್ಣಸಂಧಿ ಪ್ರಾಪ್ತವಾಯಿತು. ವಿಷ್ಣುಪುರಕ್ಕೆ ಆತ ಬಂದ ದಿನ ಊರಿನವರಿಂದ ಒಳ್ಳೆಯ ಸ್ವಾಗತವಾಯಿತು. ಯುವರಾಜರ ಆಳು-ಹೋಳುಗಳಂತೂ ನಯೀಮನ ಆದರ ಸತ್ಕಾರದಲ್ಲಿಯೇ ತೊಡಗಿದ್ದರು.

ಒಂದು ದಿನ ಯುವರಾಜರ ತಾಯಿ ಬಂದು ನಯೀಮನೆದುರು ಕೈಕಟ್ಟಿ, "ನನ್ನ ಮಗನ ಜೀವ ತಮ್ಮ ಕೈಯಲ್ಲಿಯೇ ಇದೆ ತಾವೇ ಆತನಿಗೆ ತಂದೆ

ಗಳಿದ್ದಂತೆ. ತಮ್ಮನ್ನು ಪಡೆದ ತಾಯಿ ನಿಜವಾಗಿ ಧನ್ಯಳು. ನಾನು ನನ್ನ
ಆಸ್ತಿಯನ್ನೆಲ್ಲ ತಮಗೆ ಅರ್ಪಿಸಬಲ್ಲೆ," ಎಂದಳು. ಸ್ವಾರ್ಥದ ಕಲ್ಪನೆ ನಯೀಮ
ನಲ್ಲಿಯ ನ್ಯಾಯಬುದ್ಧಿಯನ್ನು ಹೊಡೆದೋಡಿಸಿತು.

೩

ಅದೇ ದಿನಗಳಲ್ಲಿ ನಯೀಮ ಕೈಲಾಸನಿಗೆ ಬೆಟ್ಟಿಯಾಗುವುದಕ್ಕೆ ಬಂದಿದ್ದ
ನಯೀಮ ಮಾತನಾಡುವ ಭರದಲ್ಲಿ ನಡೆದುದೆಲ್ಲವನ್ನು ಹೇಳಿಬಿಟ್ಟು, ತಾನ
ಮಾಡಿದುದು ಸರಿ ಎಂದು ಪ್ರತಿಪಾದಿಸತೊಡಗಿದ.

"ಪಾಪವನ್ನು ಯಾರು ಮಾಡಿದರೂ ಎಲ್ಲಿ ಮಾಡಿದರೂ ಅದು ಪಾಪವೇ
ಎಂದು ಕೈಲಾಸ ತನ್ನ ಅಭಿಪ್ರಾಯವನ್ನಿತ್ತ.

" ಹಾಗಲ್ಲ. ನಾವು ಅನ್ಯಾಯ ಮಾಡಿದರೂ ಕೂಡ ಯಾರದಾದರು
ಜೀವ ಉಳಿಯುವಂತಿದ್ದರೆ ನಾವು ಅನ್ಯಾಯ ಮಾಡಲು ಅಡ್ಡಿಯಿಲ್ಲ. ಯುವ
ರಾಜರಿನ್ನೂ ಎಳೆ ವಯಸ್ಸಿನ ತರುಣರು. ಅಲ್ಲದೆ ಉದಾರರೂ, ಬುದ್ಧಿವಂತರೂ
ಸಹೃದಯರೂ ಆಗಿದ್ದಾರೆ. ಬೇಕಾದರೆ ನೀನು ಒಮ್ಮೆ ಬೆಟ್ಟಿಯಾಗಿ ನೋಡು
ಅವರ ಸ್ವಭಾವ ಅತ್ಯಂತ ನಮ್ರವಾಗಿದೆ. ನಾನು ಅವರ ಕೃತ್ಯ ಸ್ತುತ್ಯವೆಂದ
ಹೇಳಲಾರೆ. ಆದರೂ ಅವರಿಗೆ ಕರಿನೀರಿನ ಮೋರೆ ತೋರಿಸುವುದು ನನ
ಇಷ್ಟವಿಲ್ಲ ಅದಕ್ಕೋಸುಗವೇ ನನಗೆ ಇಪ್ಪತ್ತು ಸಾವಿರ ರೂಪಾಯಿಗಳ ಗಂಟ
ಕೈಗೆ ಹತ್ತಿದೆ. ಆದುದರಿಂದ ನಾನು ರಿಪೋರ್ಟಿನಲ್ಲಿ ವೈಯಕ್ತಿಕ ವೈಮನಸ್ಯ
ದಿಂದ ಈ ದುರ್ಘಟನೆ ನಡೆಯಿತು, ಇದರಲ್ಲಿ ಯುವರಾಜರ ಎಳ್ಳಷ್ಟು
ಸಂಬಂಧವಿಲ್ಲವೆಂದೇ ಬರೆದುಬಿಡುವೆ ಯುವರಾಜರು ಅಪರಾಧಿಯೆಂದ
ತೋರಿಸುವ ಆಧಾರಗಳು ದೊರೆತರೂ ಕೂಡ ಅವುಗಳನ್ನು ಮುಚ್ಚಿಡಬೇಕ
ಗುವುದು. ನನ್ನನ್ನು ಈ ಕಾರ್ಯಕ್ಕೆ ನಿಯಮಿಸುವುದರಲ್ಲಿ ಅಧಿಕಾರಿಗಳ ಒಂದ
ಕುಯುಕ್ತಿಯಿದೆ. ಯುವರಾಜರು ಹಿಂದುಗಳು, ಆದುದರಿಂದಲೇ ಜಿಲ್ಲಾಧಿ
ಕಾರಿಗಳು ನನ್ನನ್ನು ಈ ಕಾರ್ಯಕ್ಕೆ ನಿಯೋಜಿಸಿದ್ದಾರೆ. ನಾನು ಎಳೆಂಟ
ಸಲ ಮುಸಲ್ಮಾನ ಜಾತಿಯ ಪರವಾಗಿ ವ್ಯವಹಾರ ಮಾಡಿದುದರಿಂದ ಅಧಿ
ಕಾರಿಗಳು ನನ್ನನ್ನು ಈ ಕೆಲಸಕ್ಕೆ ನಿಯಮಿಸಿದರು. ಇಷ್ಟು ದಿನಗಳ ವರೆ

ಹಿಂದುಗಳು ನನ್ನನ್ನು ಧರ್ಮವಿರೋಧಿ ಎಂದು ಕರೆಯುತ್ತಿದ್ದರು. ಹೀಗೆ ಮಾಡುವುದರಿಂದ ಅದೂ ಸ್ವಲ್ಪ ಕಡಿಮೆಯಾಗಬಹುದಲ್ಲವೆ?" ಎಂದು ನಯೀಮ ತನ್ನ ಪ್ರತಿಪಾದನೆ ಸಮರ್ಥಿಸಿದ.

"ಈ ರಹಸ್ಯವೆಲ್ಲಾದರೂ ಹೊರಬಿದ್ದರೆ?" ಕೈಲಾಸ ಸಂಶಯದಿಂದ ಕೇಳಿದ.

"ನಾನೇನು ಸರ್ವಜ್ಞನಲ್ಲ. ರಹಸ್ಯ ಹೊರಬಿದ್ದರೆ ಬೀಳಲಿ. ಆದರೆ ಜನರು ಆ ರಹಸ್ಯವನ್ನು ನಂಬಲಾರರು. ಏಕೆಂದರೆ ನಾನು ಮುಸಲ್ಮಾನ ಧರ್ಮಪಕ್ಷಪಾತಿ ಎಂದು ಪ್ರಸಿದ್ಧನಾಗಿಲ್ಲವೇ? ಇದನ್ನು ನೀನು ನೈತಿಕದೃಷ್ಟಿಯಿಂದ ಏನು ಹೇಳಬಲ್ಲೆ? ಒಳ್ಳೆಯದೆ ಕೆಟ್ಟದೆ?" ಎಂದು ನಯೀಮ ಕೇಳಿದ.

"ದುರ್ದೈವದಿಂದ ಉಳಿದ ಸಂಸ್ಥಾನಗಳಲ್ಲೂ ಇಂತಹ ದುಷ್ಕೃತ್ಯಕ್ಕೆ ಉತ್ತೇಜನ ದೊರೆಯುತ್ತದೆ. ಹಣದಿಂದ ದೊಡ್ಡ ದೊಡ್ಡ ಪಾಪಗಳೂ ಅಡಗಿ ಹೋಗುತ್ತವೆಂದು, ಇದರಿಂದ ದುಷ್ಪರಿಣಾಮವೆಷ್ಟಾಗುವುದೆಂದು ನೀನು ಯೋಚಿಸಲಾರೆಯಾ?" ಕೈಲಾಸ ಕೇಳಿದ.

"ಯೋಚಿಸುವ ಆವಶ್ಯಕತೆಯೇ ಇಲ್ಲ. ಧನದಿಂದ ಪಾಪಗಳು ಮುಚ್ಚಿ ಹೋಗುವವೆಂಬುದೇನು ಸುಳ್ಳಾದುದೇ?" ನಯೀಮ ಹೇಳಿದ.

ಇದೇ ರೀತಿಯಾಗಿ ಗೆಳೆಯರಲ್ಲಿ ತರ್ಕವಿತರ್ಕ ಬೆಳೆದುಕೊಂಡಿತು ಆದರೆ ಕೈಲಾಸ ತನ್ನ ಗೆಳೆಯನ ಮಾನ ಉಳಿಸುವುದಕ್ಕೋಸ್ಕರ ತನ್ನ ನ್ಯಾಯವಿಚಾರಗಳನ್ನು ಬದಿಗಿರಿಸಬೇಕಾಯಿತು.

೪

ವೃತ್ತಪತ್ರಿಕೆಗಳಲ್ಲಿ ವಿಷ್ಣುಪುರದ ಹತ್ಯಾಕಾಂಡದ ಚರ್ಚೆ ನಡೆಯತೊಡಗಿತು. 'ವಿಷ್ಣುಪುರದ ಹತ್ಯಾಕಾಂಡಕ್ಕೆ ಯುವರಾಜರೇ ಕಾರಣರೆಂ'ದು ವೃತ್ತಪತ್ರಿಕೆಗಳೆಲ್ಲ ಏಕಕಂಠದಿಂದ ಹೇಳಿದವು. ಅಲ್ಲದೆ 'ಈ ವಿಚಾರ ಇನ್ನೂ ನಿರ್ಧಾರವಾಗಿಲ್ಲ. ಆದುದರಿಂದ ಟೀಕಿಸಲಾಗುವುದಿಲ್ಲ.' ಎಂದು ಬರೆಯುತ್ತಿದ್ದವು.

ನಯೀಮ ತನ್ನ ವಿಚಾರಗಳನ್ನು ಸಂಪೂರ್ಣವಾಗಿ ಪ್ರಕಟಿಸಲು ಒಂದು ತಿಂಗಳು ಅವಧಿ ಬೇಕಾಯಿತು. ಆತನ ರಿಪೋರ್ಟ್ ಪ್ರಸಿದ್ಧವಾದೊಡನೆ ಜನತೆಯಲ್ಲಿ ಒಂದು ಬಗೆಯ ಹಾಹಾಕಾರ ಹುಟ್ಟಿಕೊಂಡಿತು. ಕೈಲಾಸನಲ್ಲಿ ಒಂದು ಸಮಸ್ಯೆಯೇ ಉತ್ಪನ್ನವಾಯಿತು. ಆತನು ತನ್ನ ಗೆಳೆಯನ ಕೃತಿಯನ್ನು ಟೀಕಿಸಲಾರ, ಪುಷ್ಟಿಗೊಳಿಸಲಾರ, ಹೀಗೆ ಉಭಯ ಸಂಕಟದಲ್ಲಿ ಸಿಲುಕಿಕೊಂಡ. ಸರಕಾರದ ಪಕ್ಷ ವಹಿಸಿದರೆ ತನ್ನ ಎಡಗಾಲಿನಿಂದ ತಾನೇ ತನ್ನ ಆತ್ಮವನ್ನು ಮೆಟ್ಟಿದಂತಾಗುತ್ತಿದ್ದಿತು. ಮೂಕನಾಗಿರುವುದೂ ಒಂದು ಬಗೆಯ ಅಪಮಾನವೆನಿಸುತ್ತಿದ್ದಿತು.

ಕೊನೆಗೆ ಆತನ ಸಹೋದ್ಯೋಗಿಗಳು ಕೈಲಾಸನನ್ನೇ ತಮ್ಮ ಪತ್ರಿಕೆಯ ಮುಖಾಂತರ ಟೀಕಿಸತೊಡಗಲು ಮೌನದಿಂದಿರುವುದು ಕೈಲಾಸನಿಗೆ ಅಸಹ್ಯವಾಯಿತು. ಸ್ವಾರ್ಥ ಮತ್ತು ಜನತೆಯ ಬಗ್ಗೆ ಉದಾರ ಕಲ್ಪನೆ ಇವುಗಳಲ್ಲಿ ಕೈಲಾಸನ ಮನಸ್ಸಿನಲ್ಲಾದ ತುಮುಲ ಯುದ್ಧದಲ್ಲಿ ಜನತೆಯೇ ಗೆದ್ದಿತು.

ಕೈಲಾಸನಿಗೆ ಇಪ್ಪತ್ತೈದು ವರುಷಗಳ ಮೊದಲು ಮೊಳಕೆಯೊಡೆದು ಇಷ್ಟು ದಿನ ಬೆಳೆದು ಬಂದ ವಿಶಾಲವಾದ ಸ್ನೇಹವೃಕ್ಷವನ್ನು ಕಡಿದೊಗೆಯುವುದು ಕಷ್ಟವಾಯಿತು. ತನ್ನ ಸುಖದುಃಖಗಳಲ್ಲಿ ಸಮಭಾಗಿಯಾಗುವವನನ್ನು ಸಹಾಯಕ್ಕೆ ತತ್ಪರನಾದವನನ್ನು ಸ್ಪಷ್ಟವಾಗಿ, ಹೇಳುವುದಾದರೆ ತನ್ನ ಇನ್ನೊಂದು ದೇಹದಂತೆ ಇದ್ದವನನ್ನು ಬಿಡುವುದೇನು ಸಾಮಾನ್ಯವೇ? 'ನಾನು ಪತ್ರಿಕಾ ಕ್ಷೇತ್ರದಲ್ಲಿ ಸೇರಲೆಬಾರದಿತ್ತು. ಅಂದರೆ ಈ ಧರ್ಮಸಂಕಟವೇ ಬರುತ್ತಿರಲಿಲ್ಲ. ಎಷ್ಟೊಂದು ದೊಡ್ಡ ವಿಶ್ವಾಸಘಾತಮಾಡಿದಂತಾಗುವುದು! ಇಲ್ಲ. ನಾನು ನಮ್ಮಿಬ್ಬರಲ್ಲಿ ಬೆಳೆದ ಸ್ನೇಹವನ್ನು ದೂಷಿತಗೊಳಿಸಲಾರೆ. ನನ್ನ ಮೇಲೆ ಈಶ್ವರನು ಕೃಪೆ ಮಾಡುವುದೇ ಆದರೆ, ಆತನು ನಾನು ಮಿತ್ರದ್ರೋಹವನ್ನೆಸಗುವ ದಿನವನ್ನೇ ತರಬಾರದು. ನನ್ನ ಮೇಲೆ ಯಾವ ಸಂಕಟಗಳು ಬಂದರೂ ನಯೀಮ ನನ್ನನ್ನು ಪಾರುಗಾಣಿಸಬಲ್ಲ. ಈಗ ಅಂತಹನ ಕುತ್ತಿಗೆಯನ್ನು ಕೂದಲೆಳೆಯಿಂದ ಕೊಯ್ಯಲೇ?' ಎಂದು ಕೈಲಾಸ ಮನಸ್ಸಿನಲ್ಲಿ ಮೆಲುಕು ಹಾಕುತ್ತಿದ್ದ. ಆದರೆ ಪತ್ರಸಂಪಾದಕನಾದುದರಿಂದ ಕೈಲಾಸ ತನ್ನ ಕಾರ್ಯವನ್ನು ಮಾಡಬೇಡವೇ? ಸಂಪಾದಕನು ನೋಡುವ ಪ್ರತಿಯೊಂದು ಕೃತಿ ನ್ಯಾಯದೃಷ್ಟಿಯಿಂದ. ಆತನು ಸಾಮಾನ್ಯವಾಗಿ ವಿಚಾರಮಾಡುವುದೆಲ್ಲವೂ

ನ್ಯಾಯವೇ ಆಗಿರುತ್ತದೆ. ಸಂಪಾದಕನ ದೃಷ್ಟಿಯಿಂದ ಅನ್ಯಾಯಿಯಾದ ಮನುಷ್ಯ ಕ್ಷುದ್ರ, ಕೀಳು; ಇಷ್ಟೇ ಅಲ್ಲ, ಒಮ್ಮೊಮ್ಮೆ ಆತ ತನ್ನ ಸ್ವಾರ್ಥವನ್ನು ನೋಡುವುದೂ ನ್ಯಾಯದೃಷ್ಟಿಯಿಂದಲೇ. ಹೀಗಾಗಿ ಸಂಪಾದಕನ ಜೀವನ ಆದರ್ಶವಾಗಿರುತ್ತದೆ.

ಸರಕಾರದಲ್ಲಿ ಕೈಲಾಸನೂ ಒಂದು ಗೌರವದ ಸ್ಥಾನ ಗಳಿಸಿದ್ದ. ಆತನ ನಿಷ್ಪಕ್ಷಪಾತ ಟೀಕೆಗಳನ್ನು ಮೆಚ್ಚಿ ಆತನನ್ನು ಸಂಪಾದಕ ಸಂಘದ ಹಿರಿಯ ನನ್ನಾಗಿ ಮಾಡಿದ್ದರು. ಇದೇ ಕಾರಣದ ಮೂಲಕ ಕೈಲಾಸನ ಕೈ ನಯೀಮನ ಕೃತಿಯನ್ನು ಟೀಕಿಸುವುದಕ್ಕೆ ಓಡುತ್ತಿದ್ದಿತು. 'ನಯೀಮನಿಂದೇನು ರಾಷ್ಟ್ರಕ್ಕೆ ಉಪಕಾರವಾಗುವಂತಿಲ್ಲ. ಆತನು ಇದ್ದರೂ ಅಷ್ಟೇ ಸತ್ತರೂ ಅಷ್ಟೇ ನ್ಯಾಯದ ದೃಷ್ಟಿಯಿಂದ ನೋಡಿದರೆ ಆತ ಅಪರಾಧಿಯೆಂಬುದು ನಿಸ್ಸಂಶಯವಾದುದು. ನನ್ನ ಮಿತ್ರನಿದ್ದರೇನಾಯಿತು? ರಾಷ್ಟ್ರ ನನ್ನ ಅಧಿದೇವತೆ, ಇಂಥ ಅಧಿದೇವತೆಗೆ ಒಂದೆರಡು ಬಲಿ ಅರ್ಪಿಸಿದರೆ ಏನು ತಪ್ಪು?' ಎಂದು ಕೈಲಾಸ ಯೋಚಿಸುತ್ತಿದ್ದ.

ಮತ್ತೊಮ್ಮೆ ಕೈಲಾಸನ ಮನಸ್ಸಿನಲ್ಲಿ ಸಂಘರ್ಷಣೆಯಾಯಿತು. ಈ ವಿಜಯ ಸಂಪೂರ್ಣ ವಿಜಯ. ಆತನ ಎಲ್ಲ ಸ್ವರೂಪವನ್ನು ಕೈಲಾಸ ಬಯಲಿಗೆಳೆಯಬಯಸಿದ. 'ಶಾಸನ ವಿಭಾಗವೆಂದರೆ ನಿಜವಾಗಿ ಲಂಚ-ಕೋರರ ವಿಭಾಗ. ಹೀಗೆ ಒಬ್ಬಿಬ್ಬರನ್ನು ಬಯಲಿಗೆಳೆದರೆ ಮುಂದೆ ಲಂಚ ಕೋರತನ ಕಡಿಮೆಯಾಗಬಹುದು. ಸರಕಾರ ಕುರುಡರ ಕಿವುಡರ ಸಂತೆ ಯೆಂದು ತೋರಿಸಿಕೊಡುವೆ. ರಾಷ್ಟ್ರಕ್ಕಿಂತ ನಯೀಮನ ಮಿತ್ರತ್ವವೇನು ಹೆಚ್ಚಿನದಲ್ಲ. ಈ ಹಾನಿಯ ಭಯದಿಂದ ನಾನೇಕೆ ರಾಷ್ಟ್ರಕಾರ್ಯವಿಮುಖ ನಾಗಬೇಕು? ಕರ್ತವ್ಯಪರಾಙ್ಮುಖನಾಗಬೇಕು? ನಚ್ಚಿನ ನಯೀಮ, ಕ್ಷಮಿಸು. ನಿನ್ನ ಕ್ಷಮೆ ಕೋರಿಯೇ ಈ ಕೆಲಸಕ್ಕೆ ಕೈಹಚ್ಚಬೇಕಾಗಿದೆ. ರಾಷ್ಟ್ರಕ್ಕೋಸುಗ ನಿನ್ನಂತಹ ಅನ್ಯಾಯಿಯೊಬ್ಬನನ್ನು ಕೊಲೆಗೈಯಬೇಕಾಗಿದೆ. ನಿನ್ನ ಸ್ಥಳದಲ್ಲಿ ನನ್ನ ಮಗನಿದ್ದರೂ ಆತನನ್ನು ಕೊಲ್ಲದೆ ಬಿಡುತ್ತಿರಲಿಲ್ಲ.' ಎಂದು ಕೈಲಾಸ ತನ್ನಲ್ಲಿ ಹೇಳಿಕೊಂಡ.

ಮರುದಿನದಿಂದ ಕೈಲಾಸ ಟೀಕೆಗೆ ಪ್ರಾರಂಭಿಸಿದ. ತಾನು ನಯೀಮ ನಿಂದ ಕೇಳಿದುದೆಲ್ಲವನ್ನು ಒಂದು ಲೇಖನಮಾಲೆಯ ರೂಪದಲ್ಲಿ ಪ್ರಕಟಿಸ

ತೊಡಗಿದ. ಮನೆಗೆ ಹತ್ತಿದ ಬೆಂಕಿಯಿಂದ ಲಂಕೆ ಸುಟ್ಟಿತಂತೆ. ಉಳಿದ ಸಂಪಾದಕರು ತರ್ಕ, ಅನುಮಾನ, ಯುಕ್ತಿಗಳ ಆಧಾರದಿಂದ ಸ್ಥಿರಪಡಿಸಲು ಪ್ರಯತ್ನಿಸುತ್ತಿದ್ದುದು ಕೈಲಾಸನ ಮೂಲಕ ಸಾಧಾರವಾಯಿತು. ಅವರು ಸಂಶಯ ಹೇಳುತ್ತಿದ್ದುದೆಲ್ಲ ಕೈಲಾಸನ ಲೇಖದಿಂದ ನಿಜವಾಯಿತು.

ಕೈಲಾಸನ ಲೇಖಗಳ ವಿಸ್ತಾರ ಕಡಿಮೆಯಾಗಿದ್ದರೂ, ಅವು ಭಾವಗರ್ಭಿತವಾಗಿರುತ್ತಿದ್ದವು. ನಯೀಮನ ಟೀಕೆ ಯಥೇಚ್ಛವಾಗಿ ನಡೆಯಿತು. ಅನೇಕ ಸಂಪಾದಕರು ಕೈಲಾಸನ ಲೇಖಗಳಿಂದ ಉತ್ತೇಜಿತರಾಗಿ ಇನ್ನಷ್ಟು ಕೀಳು ತರದಿಂದ ಟೀಕಿಸತೊಡಗಿದರು. ಕೈಲಾಸ ನಯೀಮನಿಗೆ ಲಂಚದ ಹಣ ದೊರೆತುದನ್ನು ಪ್ರಕಟಿಸಿಬಿಟ್ಟ. ನಯೀಮ ಲಂಚ ತೆಗೆದುಕೊಳ್ಳುವುದನ್ನು ನೋಡಿದ ಒಬ್ಬ ಪೋಲಿಸನನ್ನೂ ಒಡೆದುಕೊಂಡು ಆತನನ್ನು ಸಾಕ್ಷಿಯೆಂದು ಕೊಟ್ಟ.

ರಾಜನೈತಿಕ ಕ್ಷೇತ್ರದಲ್ಲಿ ವಿಹ್ವಲತೆ ಬೆಳೆದುಕೊಂಡಿತು. ಪತ್ರ ಸಂಪಾದಕರಿಗೆ ಅಧಿಕಾರಿಗಳನ್ನು ಟೀಕಿಸುವ ಸಂಧಿ ದೊರೆಯುವುದು ಕಡಿಮೆ. ಸಿಕ್ಕಾಗ ಯಾರಾದರೂ ಬಿಟ್ಟಾರೇ? ಎಲ್ಲೆಡೆಗಳಲ್ಲಿ ನಿಷೇಧಸೂಚಕ ಸಭೆಗಳಾದವು. ಎಷ್ಟೋ ಸದಸ್ಯರು ಸರಕಾರದ ವಿರುದ್ಧ ಸಡ್ಡು ಹೊಡೆದರು. ಶಾಸನ ವಿಭಾಗದ ಅಧಿಕಾರಿಗಳಂತೂ ಮೋರೆ ಕೆಳಗೆ ಮಾಡಿಕೊಂಡೇ ನಡೆಯುತ್ತಿದ್ದರು. ಕೊನೆಗೆ ಅಂತ್ಯದ ಉಪಾಯವೆಂದು ನಯೀಮ ತನ್ನ ಮಾನಹಾನಿಯಾಯಿತೆಂದು ಕೈಲಾಸನ ಮೇಲೆ ಕಟ್ಟಳೆ ನಡೆಯಿಸಿದ.

೫

ನಯೀಮನಿಗೆ ಸರಕಾರದವರು ತಮ್ಮ ವಕೀಲನೊಬ್ಬನನ್ನು ಕೊಟ್ಟಿದ್ದರು. ಆದರೆ ಕೈಲಾಸ ತನಗೆ ತಾನೇ ವಕೀಲನಾಗಬೇಕಾಗಿದ್ದಿತು. ಏಕೆಂದರೆ ಒಬ್ಬರೂ ವಕೀಲರು ಕಟ್ಟಳೆ ಸಾಗಿಸಲು ಒಪ್ಪಲಿಲ್ಲ. ತಿಂಗಳುಗಟ್ಟಲೆ ಕಟ್ಟಳೆ ನಡೆಯಿತು. ಜನತೆಯಲ್ಲಿ ಅಭಿರುಚಿಯೂ ಬೆಳೆಯಿತು. ದಿನಾಲು ಸಾವಿರಾರು ಜನರು ಕೋರ್ಟಿಗೆ ನೋಡಲು ಬರುತ್ತಿದ್ದರು. ದಿನವೂ ಪೇಟೆಯಲ್ಲಿ ವೃತ್ತಪತ್ರಿಕೆಗಳ ಲೂಟಿಯಾಗುತ್ತಿತ್ತು. ಸಮಾಚಾರ ಪತ್ರ ಕೊಂಡವರು ಓದಿ,

ಮತ್ತೆ ಇತರರಿಗೆ ಮಾರುತ್ತಿದ್ದರು. ಈ ರೀತಿಯಿಂದಲಾದರೂ ನಯೀಮ ಪ್ರಸಿದ್ಧನಾದ; ಆತ ಜನತೆಯ ಕ್ರೋಧಕ್ಕೆ ತುತ್ತಾದ.

ಕಟ್ಟಳೆ ನಡೆದಾಗ ಕೈಲಾಸನ ಮನಸ್ಸು ಅಸ್ಥಿರವಾಗುತ್ತಿತ್ತು. ತಾನು ತನ್ನ ಗೆಳೆಯನ ಎದೆಗೆ ಚೂರಿಯಾದೆನೆಂದೇ ಕೈಲಾಸನ ಭಾವನೆ. ಅದೊಂದು ನಯೀಮ ಕೈಲಾಸರ ಅಗ್ನಿಪರೀಕ್ಷೆಯಾಗಿತ್ತು. ಎರಡೂ ಮುಖಗಳು ಉದಾಸೀನವಾಗಿ ತೋರುತ್ತಿದ್ದವು. ಒಂದು ಆತ್ಮಗ್ಲಾನಿಯಿಂದಾದರೆ ಇನ್ನೊಂದು ಹೆದರಿಕೆಯಿಂದ. ನಯೀಮ ಪ್ರಸನ್ನವದನನಾಗಬಯಸುತ್ತಿದ್ದ. ಒಮ್ಮೊಮ್ಮೆ ಒಣ ನಗೆಯನ್ನೂ ನಗುತ್ತಿದ್ದ.

ಕೈಲಾಸ ಕೇಳಿದ, "ತಾವೂ ನಾನೂ ಕೂಡಿಯೇ ಕಲಿಯುತ್ತಿದ್ದೆವೆಂಬುದನ್ನು ತಾವು ಸ್ಮರಿಸಬಲ್ಲಿರಾ?"

"ಸ್ಮರಿಸಬಲ್ಲೆ," ಅಧ್ಯತೆಯಿಂದ ನಯೀಮ ಹೇಳಿದ.

"ತಾವೂ ನಾನೂ ಜೀವದ ಗೆಳೆಯರಾಗಿದ್ದೆವೆಂಬುದನ್ನು ತಾವು ನೆನೆಯಬಲ್ಲಿರಾ?" ಕೈಲಾಸ ಕೇಳಿದ.

"ಅವಶ್ಯವಾಗಿ," ನಯೀಮ ಹೇಳಿದ.

"ತಾವು ಪ್ರಕರಣದ ವಿಚಾರಣೆ ಮಾಡುತ್ತಿದ್ದಾಗ ನಾನು ತಮಗೆ ಬೆಟ್ಟಿಯಾಗುವುದಕ್ಕೆ ಬಂದುದನ್ನು ತಾವು ಜ್ಞಾಪಿಸಬಲ್ಲಿರಾ?"

"ನಿಜವಾಗಿ."

"ಆಗ ತಾವು ಯುವರಾಜರೇ ನಿಜವಾದ ಅಪರಾಧಿಗಳೆಂದು ನನ್ನೊಡನೆ ಹೇಳಲಿಲ್ಲವೇ?" ಕೈಲಾಸ ಪ್ರಶ್ನೆ ಮಾಡಿದ.

"ನಿಶ್ಚಿತವಾಗಿಯೂ ಇಲ್ಲ." ನಯೀಮ ಒಡನುಡಿದ.

"ಆಗ ತಾವು ಇಪ್ಪತ್ತುಸಾವಿರ ರೂಪಾಯಿಗಳ ಗಂಟು ದೊರೆಯಿತೆಂದು ಹೇಳಲಿಲ್ಲವೇ?"

ನಯೀಮ ಸ್ವಲ್ಪವೂ ಕದಲಲಿಲ್ಲ. ತನ್ನ ಅಭಿಪ್ರಾಯಕ್ಕೆ ಹಿಂದೆಗೆಯಲಿಲ್ಲ; ಸ್ವಲ್ಪವೂ ದನಿ ನಡುಗಿಸಲಿಲ್ಲ; ಆತನ ಮೋರೆಯ ಮೇಲೆ ಅಶಾಂತಿ ಭಯದ ಚಿಹ್ನೆಗಳು ಕೂಡ ತೋರಲಿಲ್ಲ; ನಿಶ್ಶಂಕಭಾವದಿಂದ ನಯೀಮ ಹೇಳಿದ, "ತಾವು ಆಗ ಕನಸಿನಲ್ಲಿ ನನ್ನನ್ನು ಕಂಡಿರಬಹುದು."

ಕೈಲಾಸನಿಗೆ ಆಶ್ಚರ್ಯವಾಯಿತು. ಮತ್ತೆ ಕೇಳಿದ, 'ನಾನು ಕೆಲವು ಸಲ ಪಕ್ಷಪಾತ ಬುದ್ಧಿಯಿಂದ ಹಿಂದುಗಳ ಮೇಲೆ ಅನ್ಯಾಯಮಾಡಿದ್ದೇನೆ. ಆದುದರಿಂದ ಹಿಂದುಗಳು ನನ್ನನ್ನು ಹಿಂದೂ ವಿರೋಧಿಯೆಂದು ಕರೆಯು ತ್ತಾರೆ,' ಎಂದು ತಾವು ಹೇಳಲಿಲ್ಲವೇ ?"

ನಯೀಮ ಎಳ್ಳಷ್ಟೂ ಒಪ್ಪಲಿಲ್ಲ. "ತಮ್ಮ ಕಲ್ಪನಾಶಕ್ತಿ ಅಪಾರ ವಾಗಿದೆ. ಇಷ್ಟು ದಿನಗಳ ವರೆಗೆ ನಾನು ನಿಮ್ಮ ಸ್ನೇಹಿತನಾಗಿದ್ದರೂ ಈ ಘಟನೆಯನ್ನು ಶೋಧಿಸುವುದರಲ್ಲಿ ಹೀಗೆ ನಿಮಗೆ ಕಲ್ಪನೆಯು ಸಹಾಯವಾಗು ವುದೆಂದು ನಾನು ಬಗೆದಿರಲಿಲ್ಲ" ನಯೀಮ ಕೊಂಕುಮಾತಿನಿಂದ ಹೇಳಿದ.

ಮುಂದೆ ಕೈಲಾಸ ಏನುತಾನೇ ಪ್ರಶ್ನಿಸಿಯಾನು? ಆತನಿಗೆ ತನ್ನ ಸೋಲಿನ ಬಗ್ಗೆ, ಅದಕ್ಕೂ ಹೆಚ್ಚಾಗಿ ನಯೀಮನ ಅನ್ಯಾಯದ ಬಗ್ಗೆ ದುಃಖವಾಯಿತು. ಮನುಷ್ಯ ತನ್ನ ಬಾಯಿಯಿಂದಲೇ ಹೇಳಿದ ಮಾತುಗಳನ್ನು ಇಷ್ಟು ದಿಟ್ಟನಾಗಿ ಅಸ್ವೀಕಾರಮಾಡುತ್ತಾನೆಂದು ಆವನು ಬಗೆದಿರಲಿಲ್ಲ. ಆಚಾರ ವಿಚಾರಗಳಲ್ಲಿ ಭೇದವಿರದ ನಯೀಮ, ಅಂತರಂಗ ಬಹಿರಂಗ ಒಂದಾಗಿರುವ ನಯೀಮ, ದನಿಯೇ ಕನ್ನಡಿಯಾಗಿ ಪರಿಣಮಿಸಿದ ನಯೀಮ ತನ್ನ ಮೇಲಿನ ಅಪರಾಧ ವನ್ನು ಸುಳ್ಳು ಹೇಳಿ ಧೂರ್ತತೆಯಿಂದ ಹಾರಿಸಿಕೊಂಡರೆ ಕೈಲಾಸ ದುಃಖಿ ಯಾಗದೆ ಏನು ತಾನೇ ಮಾಡಿಯಾನು?

ಕೋರ್ಟಿನಿಂದ ಕೈಲಾಸನು ನಯೀಮನಿಗೆ ಇಪ್ಪತ್ತು ಸಾವಿರರೂಪಾಯಿ ಗಳ ಡಿಕ್ರಿ ಕೊಡಬೇಕೆಂದು ನಿರ್ಣಯವಾಯಿತು. ಕೈಲಾಸನಿಗೆ ವಜ್ರಾಘಾತ ವಾಯಿತು!

೬

ಈ ನಿರ್ಣಯದಿಂದ ಸರಕಾರದ ಪಕ್ಷದಲ್ಲಿ ಮತ್ತೆ ವಿಹ್ವಲತೆ ಹರಡಿ ಕೊಂಡಿತು. ಸರಕಾರೀ ಪಕ್ಷದ ಪತ್ರಿಕೆಗಳು ಕೈಲಾಸನು ಧೂರ್ತನೆಂದವು. ಜನತೆಯ ಪಕ್ಷದ ಪತ್ರಗಳು ನಯೀಮನು ಕ್ರೂರನೆಂದವು. ನಯೀಮನಿಗೆ ಕೋರ್ಟಿನಲ್ಲಿ ಜಯವು ದೊರೆತರೂ ಜನತೆ ಅನ್ಯಾಯವಾಯಿತೆಂದೇ ಒಡನುಡಿ ಯಿತು. ಬೇರೆ ಬೇರೆ ಸ್ಥಳಗಳಿಂದ ಕೈಲಾಸನಿಗೆ ಪತ್ರಗಳೂ ತಂತಿಗಳೂ

ಬಂದವು. ಪತ್ರಿಕೆಗಳಲ್ಲಿ ಆವನ ನಿರ್ಭಯತೆ ಹಾಗೂ ಸತ್ಯನಿಷ್ಠೆಗಳ ಪ್ರಶಂಸೆ ಯಾಗತೊಡಗಿತು. ಅಲ್ಲದೆ ಬೇರೆ ಬೇರೆ ಸ್ಥಳಗಳಲ್ಲಿ ಸಭೆಗಳಾಗಿ ನಿಷೇಧ-ಸೂಚಕ ಗೊತ್ತುವಳಿಗಳೂ ಸ್ವೀಕರಿಸಲ್ಪಟ್ಟವು. ಆದರೆ ಒಣಗಾಳಿಯಿಂದ ಮಳೆಯಾದೀತೇ? ಕೈಲಾಸ ರೂಪಾಯಿಗಳನ್ನೆಲ್ಲಿಂದ ತರಬೇಕು? ಅವು ಕೂಡ ಇಪ್ಪತ್ತು ಸಾವಿರ! ಅಷ್ಟು ರೂಪಾಯಿಗಳನ್ನು ಕೈಲಾಸ ಕನಸಿನಲ್ಲಿಯೂ ಕಂಡಿರ ಲಿಲ್ಲ. ಇಷ್ಟು ರೂಪಾಯಿಗಳಿದ್ದರೆ ಆತ ಈ ವ್ಯವಸಾಯವನ್ನು ಕೈಕೊಳ್ಳು-ತ್ತಲೇ ಇರಲಿಲ್ಲ. ಕೈಲಾಸ ತನ್ನ ಪತ್ರಿಕೆಯ ಸದಸ್ಯರಿಗೆ ಮರುವರುಷ ವಂತಿಗೆ ಮುಂಗಡವಾಗಿ ಕೊಡಲು ಕೇಳಿಕೊಳ್ಳಬೇಕೆಂದ. ಆದರೆ ಅದೂ ಅನ್ಯಾಯ ವೆನಿಸಿತು. ತಾನೊಬ್ಬನೇ ಅಪರಾಧಿಯಾಗಿರುವಾಗ ಇತರರನ್ನೂ ಏಕೆ ಅಪ-ರಾಧಿ ಮಾಡಬೇಕು? ಜನತೆ ಐದಾರು ಸಾವಿರ ಹಣ ಕೂಡಿಸಿ ಕೊಟ್ಟರೂ ಕೊಡಬಹುದು. ಆದರೆ ಇದು ಸಂಪಾದಕನ ಕರ್ತವ್ಯದ ವಿರುದ್ಧವಾಗಿದೆ. ನನಗಂತೂ ಹಾನಿಯಾಗಿದೆ. ಇತರರನ್ನು ಹಾನಿಗೇಕೆ ಗುರಿಮಾಡಲಿ? ನನ್ನ ಪತ್ರಿಕೆ ನಿಂತುಹೋಗಲಿ. ನನ್ನನ್ನು ಸೆರೆಮನೆಗೆ ಅಟ್ಟಲಿ. ನನ್ನ ಸೊತ್ತನ್ನೆಲ್ಲ ಹರಾಜು ಮಾಡಲಿ. ಚಿಂತೆಯಿಲ್ಲ. ಆದರೆ ಇನ್ನೊಬ್ಬರೆದುರು ನಿಂತು ಕೈ ಒಡ್ಡಲಾರೆ.

ಸೂರ್ಯೋದಯದ ಕಾಲವಾಗಿದ್ದಿತು. ಚಳಿ ಮೈಯನ್ನು ಕೊರೆಯುತ್ತಿದ್ದಿತು. ಕೈಲಾಸನ ಮನೆಯಲ್ಲಿ ನಿಸ್ತಬ್ಧತೆ! ಹುಡುಗರೂ ಅಳುತ್ತಿರಲಿಲ್ಲ. ದೀಪವೇ ಆರುತ್ತಿರುವಾಗ ಮನೆಯಲ್ಲಿ ಬೆಳಕೆಲ್ಲಿಂದ ಬಂದೀತು? ಇಂದು ಆತನ ಮನೆ ಹರಾಜಾಗುವುದಿದ್ದಿತು.

ಕೈಲಾಸ ತನ್ನ ಅಂತರ್ವೇದನೆಯನ್ನು ನಿಗ್ರಹಿಸಿಕೊಂಡು ಹೇಳಿದ, “ ಪ್ರಾಯಶಃ ನನ್ನಿಂದ ಜನಸೇವೆಯ ಕೊನೆಯ ದಿನವಾಗಬಹುದು. ಇಪ್ಪ-ತ್ತೈದು ವರುಷಗಳ ವರೆಗೆ ಕಟ್ಟಿದ ಮನೆ ಮುರಿದುಹೋಗುವುದು; ಪತ್ರಿಕೆ ನಿಂತುಹೋಗುವುದು. ನನ್ನ ಕಾಲುಗಳಲ್ಲಿ ಅಪಮಾನಜನಕವಾದ ಸಂಕೋಲೆ ಹಾಕುವರು. ಈ ಶಾಂತಿಕುಟೀರದ ಮಾರಾಟವಾಗುವುದು. ಅಲ್ಪ ಸಮಯ ದಲ್ಲಿಯೇ ಜನತೆ ನನ್ನ ಸೇವೆಯನ್ನು ಮರೆಯುವುದು. ನನಗೋಸುಗ ಕಣ್ಣೀರು ಸುರಿಸುವನೊಬ್ಬನೂ ಕೂಡ ದೊರೆಯಲಾರ.”

ಇಂದು ಅಗ್ರಲೇಖ ಬರೆಯುವುದಿದೆಯೆಂದು ಆತನಿಗೆಜ್ಞಾಪಕವಾಯಿತು.

'ನನ್ನ ದುರ್ದೈವದಿಂದ ಇಂದು ಪತ್ರಿಕೆಯ ಕೊನೆಯ ದಿನ. ಇಷ್ಟು ದಿನಗಳ ವರೆಗೆ ನನ್ನಿಂದ ಅನೇಕ ತಪ್ಪುಗಳಾಗಿರಬಹುದು. ಸುಹೃದಯ ವಾಚಕರು ಕ್ಷಮಿಸಬೇಕು. ತಾವು ನನಗೆ ಸಹಾನುಭೂತಿ ತೋರಿಸಿದುದರಿಂದ ನಾನು ಅತ್ಯಂತ ಋಣಿಯಾಗಿದ್ದೇನೆ. ನನ್ನ ದೈವದ ದುರ್ವಿಪಾಕದಿಂದ ನಾನು ಜನತೆಯ ಸೇವೆ ಮಾಡಲಾರದಾದೆ' ಎಂದು ಮೊದಲಾಗಿ ಬರೆಯಬೇಕು ಎಂದು ಯೋಚಿಸಿಕೊಂಡು ಕೈಲಾಸ ಎದ್ದ. ಹೆಜ್ಜೆಯ ಸದ್ದು ಕೇಳಬಂತು. ಕತ್ತೆತ್ತಿ ನೋಡಿದರೆ ನಯೀಮ!! ಅದೇ ನಗುಮುಖ, ಅವೇ ಕಣ್ಣುಗಳು. ನಯೀಮ ಕೂಡಲೆ ಕೈಲಾಸನನ್ನಪ್ಪಿಕೊಂಡ.

"ನನ್ನ ಗಾಯದ ಮೇಲೆ ಉಪ್ಪು ಉದುರಿಸಲು ಬಂದಿದ್ದೀಯಾ? ನನ್ನ ಹಣವನ್ನು ನಿನ್ನ ಕಾಲುಗಳಿಂದ ತುಳಿಯಬಂದೆಯಾ?" ಕೈಲಾಸ ಅಪ್ಪುಗೆ ಬಿಡಿಸಿಕೊಂಡು ಕೇಳಿದ.

ನಯೀಮ ಕಂಠ ಸಡಿಲುಮಾಡಿಕೊಂಡು ಹೇಳಿದ, "ಇದೇ ಗೆಳೆತನದ ಲಕ್ಷಣವಲ್ಲವೇ? "

"ಚೇಷ್ಟೆ ಬೇಡ. ಸಾಯುತ್ತಿದ್ದೇನೆ. ಬಹಳ ಮಾತನಾಡಿದರೆಕೊಂದೇನು," ಕೈಲಾಸ ಒರಟುತನದಿಂದ ಹೇಳಿದ.

ನಯೀಮನ ಕಣ್ಣುಗಳಲ್ಲಿ ನೀರು ಬಂದವು. "ನಿನ್ನಿಂದ ಇಂತಹ ಕಟು ವಾಕ್ಯಗಳನ್ನು ಕೇಳಲೆಂದೇ ಬಂದಿದ್ದೇನೆ. ಮನಸ್ಸಿಗೆ ಸಮಾಧಾನವಾಗುವಷ್ಟು ಬೈ." ನಯೀಮನೆಂದ.

"ಓಹೋ, ಹಾಗಾದರೆ ಈಗ ಹರಾಜಿಗೋಸ್ಕರ ಕೋರ್ಟಿನ ಶಿಪಾಯಿ ಬಂದರೆ! ಹೇಳಿರಿ, ನಾನೇನು ಮಾಡಬೇಕು?" ಕೈಲಾಸನೆಂದ.

"ನಾವಿಬ್ಬರೂ ಚಪ್ಪಾಳೆಯಿಕ್ಕಿ ಆ ಮಂಗನನ್ನು ಕುಣಿಸಿದರಾಯಿತು." ನಯೀಮ ನುಡಿದ.

"ನಿನಗೆ ಮಕ್ಕಳ ಮೇಲೆ ದಯೆಯಿಲ್ಲವೇ?" ಕೈಲಾಸ ಕೇಳಿದ.

"ಒಮ್ಮೊಮ್ಮೆ ನಿನಗೆ ಜಯವಾಗುತ್ತಿತ್ತು. ಈಗ ನನಗೆ ಜಯವಾಗಿದೆ." ನಯೀಮನೆಂದ.

"ಸತ್ಯವನ್ನುಪೇಕ್ಷಿಸುವುದು ನನ್ನ ಸಿದ್ಧಾಂತಕ್ಕೆ ವಿರುದ್ಧವಾದ ಮಾತು." ಕೈಲಾಸ ಹೇಳಿದ.

"ಸತ್ಯದ ಕತ್ತು ಹಿಚುಕುವುದರಿಂದ ನನಗೆ ಅನುಕೂಲ," ನಯೀಮ ಹೇಳಿದ.

"ಈಗ ನನ್ನ ಮಕ್ಕಳು ಬರುತ್ತಾರೆ. ನೋಡು, ಒಬ್ಬರಲ್ಲ ಇಬ್ಬರಲ್ಲ, ಏಳು ಜನರು." ಕೈಲಾಸ ಹೇಳಿದ.

"ಹೋಗಲಿ, ನನಗೆ ಹಸಿವೆಯಾಗಿದೆ ಏನಾದರೂ ಕೊಡು," ನಯೀಮ ಹೇಳಿದ.

"ಇಂದು ದೊಡ್ಡ ಏಕಾದಶಿ! ಕೋರ್ಟಿನ ಸಿಪಾಯಿ ಯಾವಾಗ ಬರುತ್ತಾನೆಂದು ಮನೆಯವರೆಲ್ಲ ನಿರೀಕ್ಷಿಸುತ್ತಿದ್ದಾರೆ. ನಿನ್ನ ಚೀಲದಲ್ಲಿ ಏನಾದರೂ ಇದ್ದರೆ ತೆಗೆ, ಇಬ್ಬರೂ ಕೂಡಿ ತಿನ್ನೋಣ. ಇದೇ ಮಿಲನ ಕೊನೆಯದಾಗಲಿ," ಕೈಲಾಸ ನಿರಾಶೆಯಿಂದ ನುಡಿದ.

"ಇನ್ನೊಮ್ಮೆ ಹೀಗೆ ಮಾಡುವೆಯಾ?" ನಯೀಮ ಕೇಳಿದ.

"ಮಾಡದೆ ಬಿಡುವೆನೇ? ಸರಕಾರ ಪಶುಬಲದಿಂದ ಆಡಳಿತ ನಡೆಸುವುದನ್ನು ಬಿಡುವವರೆಗೆ ಪ್ರತಿಭಟಿಸುತ್ತಲೇ ಇರುವೆ. ಆದರೆ ಆ ಸಂಧಿ ನನಗೆ ದೊರೆಯದೆಂದು ಯೋಚಿಸಿ ಮನಸ್ಸು ಕುಗ್ಗಿಹೋಗಿದೆ. ಇಲ್ಲಿ ರದ್ದಿಯ ಕಾಗದಗಳನ್ನುಳಿದು ಬೇರೇನೂ ಇಲ್ಲವೇ ಇಲ್ಲ." ಕೈಲಾಸ ಹೇಳಿದ.

"ಹಾಗಾದರೆ ನಾನು ತಮ್ಮಿಂದ ಅದಕ್ಕೆ ಐದು ಮಡಿ ಹಣ ವಸೂಲ ಮಾಡುವೆ. ನಿನ್ನದೇನು ಮತ?" ನಯೀಮನೆಂದ.

"ಬಾಯಿ ತೊಳೆದುಕೊಂಡು ಮಾತನಾಡು," ಕೈಲಾಸನೆಂದ.

"ನನಗೆ ರೂಪಾಯಿಗಳ ಆವಶ್ಯಕತೆಯಿದೆ. ಏನಾದರೂ ಕಾಗದಪತ್ರವನ್ನಾದರೂ ಮಾಡಬಹುದಲ್ಲ " ನಯೀಮನೆಂದ.

"ಯುವರಾಜರಿಂದ ಇಪ್ಪತ್ತುಸಾವಿರ ರೂಪಾಯಿಗಳನ್ನು ಪಡೆದರೂ ಸಂತೋಷವಾಗಲಿಲ್ಲವೇ? ಅಪಚನವಾದೀತು." ಕೈಲಾಸನೆಂದ.

"ಇಲ್ಲಿ ಕಾಗದಗಳನ್ನು ಬಿಟ್ಟು ಇವೆಯೇನು ?" ಕೈಲಾಸನೆಂದ.

"ಹಣ ಮುಟ್ಟಿಸುವುದು ನಿನಗೆ ಸಾಧ್ಯವಿಲ್ಲವಷ್ಟೇ? ನಾನು ಅಪೇಕ್ಷಿಸಿ-ದ್ದುದನ್ನು ಈ ಮನೆಯಿಂದ ತೆಗೆದುಕೊಳ್ಳಬಹುದೇ?" ನಯೀಮ ಕೇಳಿದ.

"ಬೇಕಾದುದನ್ನು ಒಯ್ಯು. ನನ್ನನ್ನು ಕೂಡ ಒಯ್ಯು. ನಾನು ಏನೂ ಅನ್ನಲಾರೆ." ಕೈಲಾಸ ಹೇಳಿದ.

"ನನಗೆ ಒಂದು ವಸ್ತು ಬೇಕು, ಒಂದೇ ಒಂದು!" ನಯೀಮ ಹೇಳಿದ.

ಕೈಲಾಸನ ಕುತೂಹಲ ಕೆರಳಿತು. 'ನನ್ನ ಹತ್ತಿರ ಅಂತಹದೇನು ವಸ್ತುವಿದೆ? ನನ್ನನ್ನು ಮುಸಲ್ಮಾನ ಧರ್ಮಕ್ಕೆ ಧರ್ಮಾಂತರಿಸಿದರೆ! ಧರ್ಮ ಒಂದು ವಸ್ತುವಲ್ಲ. ಮಾನವನ ಕರ್ತವ್ಯಪಥ.' ಕೇಳಿಯೇಬಿಡೋಣವೆನ್ನಿಸಿತು. ಕೇಳಿದ "ಯಾವುದು?"

"ತಮ್ಮವಳೊಡನೆ ಒಂದು ಕ್ಷಣ ಮಾತುಕತೆ!" ನಯೀಮನೆಂದ.

"ಓಹೋ, ಎಷ್ಟೋ ಬಾರಿ ಮಾತನಾಡಿದ್ದೀಯಲ್ಲ ಇನ್ನೇನು ಕಾರಣ?" ಕೈಲಾಸ ಕೇಳಿದ.

"ಏನೇ ಕಾರಣವಿರಲಿ, ಒಪ್ಪುವುದಾದರೆ ಒಪ್ಪಬೇಕು, ಇಲ್ಲವಾದರೆ ಬಿಡಬೇಕು. ಆದರೆ ಏಕಾಂತದ ಮಾತುಕತೆ, ತಿಳಿಯಿತೇ?" ನಯೀಮನೆಂದ.

"ಒಪ್ಪಿಗೆಯಿದೆ, ಆದರೆ ಡಿಕ್ರಿಯ ರೂಪಾಯಿಗಳನ್ನು ಕೇಳಬಾರದು. ಒಪ್ಪಿಗೆಯೇ?" ಕೈಲಾಸ ಕೇಳಿದ.

"ಒಪ್ಪಿಗೆ" ನಯೀಮ ಒಪ್ಪಿದ.

"ಆದರೆ ನಾಜೂಕು ಹೆಣ್ಣುಮಗಳು. ಏನಾದರೂ ನಾಲಿಗೆ ಉದ್ದು ಬಿಟ್ಟೇ!" ಕೈಲಾಸ ಹೇಳಿದ.

"ತಮ್ಮ ಉಪದೇಶದ ಆವಶ್ಯಕತೆಯಿಲ್ಲ ಸ್ವಾಮಿ. ನನ್ನನ್ನು ಕರೆದು ಕೊಂಡಾದರೂ ಹೋಗಲ್ಲ," ನಯೀಮ ಕೇಳಿಕೊಂಡ.

"ತಲೆ ಕೆಳಗೆ ಮಾಡಬೇಕು." ಕೈಲಾಸ ಹೇಳಿದ.

"ಕಣ್ಣಿಗೆ ಬೇಕಾದರೆ ಬಟ್ಟೆಕಟ್ಟು," ನಯೀಮ ಎಂದ.

ಕೈಲಾಶನ ಮನೆಯಲ್ಲಿ ಪರದೆಯಿರಲಿಲ್ಲ. ಉಮಾ ಕೈಲಾಸನ ಮಡದಿ,

ಚಿಂತಿತಳಾಗಿ ಕುಳಿತಿದ್ದಳು. ನಯೀಮ ಕೈಲಾಸ ಕೂಡಿ ಬಂದುದನ್ನು ನೋಡಿ ಆಕೆಗೆ ಆಶ್ಚರ್ಯವಾಯಿತು. "ಬರಬೇಕು ನಯೀಮಜೀ, ಬಹಳ ದಿನ ಗಳ ಮೇಲೆ ನೆನಪಾಯಿತೆಂದು ಕಾಣುತ್ತದೆ," ಉಮಾ ಕೇಳಿದಳು.

ಕೈಲಾಸ ನಯೀಮನನ್ನು ಅಲ್ಲಿಯೇ ಕೋಣೆಯಲ್ಲಿ ಬಿಟ್ಟು ಹೊರಗೆ ಬಂದ. ಆದರೆ ಬದಿಯ ಕೋಣೆಯೊಳಗೆ ಕುಳಿತು ಅವರ ಮಾತು ಕೇಳ ತೊಡಗಿದ. ಕೆಟ್ಟ ವಿಚಾರದಿಂದಲ್ಲ, ಕುತೂಹಲದಿಂದ.

"ನಾವು ಸರಕಾರೀ ಅಧಿಕಾರಿಗಳು. ನಮಗೆ ಬಿಡುವೇ ದೊರೆಯುವು ದಿಲ್ಲ. ಡಿಕ್ರಿಯ ರೂಪಾಯಿಗಳನ್ನು ಇಸಿದುಕೊಳ್ಳಲು ಬಂದಿದ್ದೇನೆ."ನಯೀಮ ನೆಂದ.

ಮುಗುಳು ನಗೆ ನಗುತ್ತಿದ್ದ ಉಮೆಯ ಮುಖ ರೂಪಾಯಿಯ ಮಾತು ಕೇಳಿದೊಡನೆ ಕಂದಿಹೋಯಿತು. "ನಾವೂ ಇದನ್ನೇ ಯೋಚಿಸುತ್ತಿದ್ದೇವೆ. ಎಲ್ಲಿಯೂ ರೂಪಾಯಿ ದೊರೆಯುವ ಆಶೆಯಿಲ್ಲ. ಅಲ್ಲದೆ ಅವರಿಗೆ ಜನರಿಂದ ಬೇಡಲು ನಾಚಿಕೆ ಬೇರೆ." ಉಮಾ ಹೇಳಿದಳು.

"ತಾವೇನು ಹೇಳುತ್ತೀರಿ? ನಾನು ರೂಪಾಯಿ ಇಸಿದುಕೊಂಡುಬಿಟ್ಟೆ." ನಯೀಮ ಹೇಳಿದ.

ಆಶ್ಚರ್ಯದಿಂದ ಉಮಾ ಕೇಳಿದಳು. "ನಿಜವೇ? ರೂಪಾಯಿಗಳೆಲ್ಲಿ ದ್ದವು?"

"ಅವನ ನಡತೆಯೇ ಹೀಗೆ. ತನ್ನ ಹತ್ತಿರ ಹಣವಿಲ್ಲೆಂದು ನಿಮಗೆ ಹೇಳಿರಬಹುದು. ಆದರೆ ನಾನು ಬೇಡಿದ ಕೂಡಲೆ ಕೊಟ್ಟ. ಈಗ ನನ್ನ ತಿಂಡಿಯ ವ್ಯವಸ್ಥೆ ಮಾಡಿರಿ." ನಯೀಮನೆಂದ.

"ಅವರು ನಿಮಗೆ ರೂಪಾಯಿ ಕೊಟ್ಟಿರಬಹುದೆಂದು ನನಗೆ ಎನಿಸುವು ದಿಲ್ಲ," ಉಮೆಯು ಹೇಳಿದಳು.

"ನೀವು ಸರಳರಿದ್ದೀರಿ, ಪಾಪ, ನಿಮಗೇನು ಗೊತ್ತು ಅವನ ಯುಕ್ತಿ? ತನ್ನ ಬಡತನದ ಹಾಡು ಹೇಳಿ ಹೇಳಿ ನಿಮಗೆ ನಂಬಿಕೆ ಹುಟ್ಟಿಸಿದ್ದಾನೆ,ಅಷ್ಟೆ." ನಯೀಮನೆಂದ.

ಕೈಲಾಸ ನಗುನಗುತ್ತ ಕೋಣೆಯಲ್ಲಿ ಬಂದು ಹೇಳಿದ.

"ಇಲ್ಲಿಯೂ ಮತ್ತೆ ನಿನ್ನ ಯುಕ್ತಿ ಪ್ರಾರಂಭವಾಯಿತೆ?"

"ರೂಪಾಯಿಗಳ ರಸೀದಿ ಕೊಡಲೆ?" ನಯೀಮ ಕೇಳಿದ.

"ತಾವು ರೂಪಾಯಿ ಕೊಟ್ಟಿರಾ? ಎಲ್ಲಿಂದ ದೊರೆತವು?" ಉಮಾ ಕೇಳಿದಳು.

"ಇನ್ನೊಂದಾದರೂ ಹೇಳುವೆ. ಒಡೆಯರೆ ಏಳಿರಿ." ಕೈಲಾಸನೆಂದ.

"ಹೇಳಿಬಿಡಿರಲ್ಲ, ನಯೀಮರಿಂದೇನು ತೊಂದರೆ?" ಉಮೆ ಕೇಳಿದಳು.

"ನಯೀಮ, ನೀನು ಉಮೆಯೆದುರು ನನ್ನ ಅಪಮಾನ ಮಾಡುತ್ತೀಯಾ?" ಕೈಲಾಸ ಕೇಳಿದ.

"ನೀನು ಜನತೆಯೆದುರು ನನ್ನ ಅಪಮಾನಮಾಡಲಿಲ್ಲವೇ?" ನಯೀಮ ಕೇಳಿದ.

"ಜನತೆಯೆದುರು ಅಪಮಾನ ಮಾಡಿದೆನೆಂದೇ ಇಪ್ಪತ್ತು ಸಾವಿರ ರೂಪಾಯಿ ಪರಿಹಾರದ ಹಣ ಕೊಡುವ ಆವಶ್ಯಕತೆ ಉಳಿಯಲಿಲ್ಲ." ಕೈಲಾಸ ಹೇಳಿದ.

" ನಾನು ಅದೇ ಟಂಕಸಾಲೆಯಿಂದ ರೂಪಾಯಿ ಕೊಡುವೆ. ಉಮಾ, ನಾನು ರೂಪಾಯಿ ಪಡೆದೆ. ಈ ದೈವಿಯಿಂದಲೇ ಜೀವ ಪಡೆದೆ." ನಯೀಮ ಹೇಳಿದ.

---

# ಬ್ಯಾಂಕಿನ ದಿವಾಳಿ

## ೧

ಲಖನೌ ನ್ಯಾಷನಲ್‌ಬ್ಯಾಂಕಿನ ಹೆಡ್ ಆಫೀಸಿನಲ್ಲಿ ಲಾಲಾ ಸಾಯಿದಾಸ ವಿರಾಮಾಸನದಲ್ಲಿ ಕುಳಿತು ಪಾಲುಗಳ ದರದ ಏರಿಳಿತವನ್ನು ನೋಡುತ್ತಿದ್ದರು. ಅದರೊಂದಿಗೇ ಈ ಸಲ ಪಾಲುಗಾರರಿಗೆ ಡೆವಿಡೆಂಡ್ ಎಲ್ಲಿಂದ ಒದಗಿಸುವುದೆಂದು ಯೋಚಿಸುತ್ತಿದ್ದರು. ಒಮ್ಮೊಮ್ಮೆ ಚಹ, ಕಲ್ಲಿದ್ದಲಿ ಹಾಗೂ ನಾರುಗಳ ಕಂಪನಿಗಳಿಗೆ ಹಣ ಒದಗಿಸಿದರೆ....? ಎನ್ನುತ್ತಿದ್ದರು. ಆದರೆ ಒಂದಕ್ಕೂ ಮನಸ್ಸೊಪ್ಪುತ್ತಿರಲಿಲ್ಲ. ಧಾನ್ಯದ ವ್ಯಾಪಾರದಲ್ಲಿ ಕೈಹಾಕಿ ಸಾಕುಬೇಕಾಗಿ ಹೋಗಿದ್ದಿತು.

ರೂಪಾಯಿಗಳನ್ನು ಹಾಗೆಯೇ ಇಟ್ಟುಕೊಂಡಾದರೂ ಮಾಡುವುದೇನು? ಎಲ್ಲಿಯಾದರೂ ತೊಡಗಿಸಿದರೆ ಲೇಸು. ಏಕೆಂದರೆ ಬ್ಯಾಂಕಿನ ಡೈರೆಕ್ಟರುಗಳ ಸಭೆ ಒಂದು ವಾರದೊಳಗಾಗಿಯೇ ಕೂಡುವುದರಲ್ಲಿತ್ತು. ಮತ್ತೆ ಅದು ತಪ್ಪಿದರೆ ಮೂರು ತಿಂಗಳುಗಳ ವರೆಗೆ ಕಾಯ್ದುಕೊಂಡಿರಬೇಕಾಗುತ್ತಿತ್ತು. ಇದನ್ನೆಲ್ಲ ಯೋಚಿಸಿಕೊಂಡು ಲಾಲಾ ಸಾಯಿದಾಸ ಗಂಟೆ ಬಾರಿಸಿದರು. ಕೂಡಲೆ ಬಂಗಾಲಿ ಬಾಬುವೊಬ್ಬರು ಬಂದು ನಮಸ್ಕರಿಸಿ ನಿಂತರು.

"ಹೊಸ ವರುಷದ ಬ್ಯಾಲನ್ಸ್ ಶೀಟು ಕಳುಹಿಸಿಕೊಡುವಂತೆ ತಾತಾ-ಸ್ಟೀಲ್ ಕಂಪನಿಯವರಿಗೊಂದು ಪತ್ರ ಬರೆ." ಸಾಯಿದಾಸ ಹೇಳಿದರು.

"ಅವರಿಗೆ ರೂಪಾಯಿಗಳ ಅವಶ್ಯಕತೆಯಿಲ್ಲ. ಅದಕ್ಕೆ ಉತ್ತರವನ್ನೇ ಕಳುಹಿಸುವುದಿಲ್ಲ," ಬಾಬು ಹೇಳಿದರು.

"ಹಾಗಾದರೆ ನಾಗಪುರ ಸ್ವದೇಶಿ ಮಿಲ್ಸ್‌ಗೆ ಬರೆ" ಸಾಯಿದಾಸ ಹೇಳಿದರು.

"ಅದರ ವ್ಯವಸ್ಥೆ ಚೆನ್ನಾಗಿಲ್ಲ. ಅದರ ಕೂಲಿಕಾರರೀಗ ಸಂಪುಹೂಡಿದ್ದಾರೆ. ಎರಡು ತಿಂಗಳಿಂದಲೂ ಮಿಲ್ಸ್ ಮುಚ್ಚಿಹೋಗಿದೆ." ಬಾಬುಗಳು ಹೇಳಿದರು.

"ಎಲ್ಲಿಗಾದರೂ ಬರೆಯಲ್ಲ! ನಿನ್ನ ದೃಷ್ಟಿಯಲ್ಲಿ ಜಗತ್ತೆಲ್ಲ ಕಪಟಿಯಾಗಿದೆ," ಸಾಯಿದಾಸ ಹೇಳಿದರು.

"ಎಲ್ಲ ಕಡೆಗೂ ಬರೆಯಬಹುದು. ಆದರೆ ಬರಿಯ ಬರೆಯುವುದರಿಂದೇನು ಪ್ರಯೋಜನ?" ಬಾಬು ಹೇಳಿದರು.

ಲಾಲಾ ಸಾಯಿದಾಸ ಒಳ್ಳೆಯ ಪ್ರತಿಷ್ಠಿತ ಕುಲದಲ್ಲಿ ಹುಟ್ಟಿದುದರಿಂದ ಬ್ಯಾಂಕಿನ ಡೈರೆಕ್ಟರರಾಗಿದ್ದರು. ಆದರೆ ವ್ಯಾವಹಾರಿಕ ಸಂಗತಿಗಳು ಅವರಿಗೆ ಅಪರಿಚಿತವಾಗಿದ್ದವು. ಆದಕ್ಕೋಸುಗವೇ ಬಂಗಾಲಿ ಬಾಬುಗಳು ಅವರಿಗೆ ಸಲಹೆಗಾರರಾಗಿ ನಿಯಮಿಸಲ್ಪಟ್ಟಿದ್ದರು. ಅವರಿಗೆ ಯಾವ ಕಂಪನಿಯ ಮೇಲೂ ವಿಶ್ವಾಸವಿರಲಿಲ್ಲ. ಅವರ ಅವಿಶ್ವಾಸದ ಮೂಲಕವೇ ಬ್ಯಾಂಕಿನ ಹಣ ತಿಜೋರಿಯನ್ನು ಬಿಟ್ಟು ಹೊರಕ್ಕೆ ಬಂದಿರಲಿಲ್ಲ. ಈ ವರುಷವೂ ಹಾಗೆಯೇ ಆಗುವ ಲಕ್ಷಣವಿದ್ದಿತು. ಸಾಯಿದಾಸರಿಗೆ ಈ ಸಂಕಟದಿಂದ ಮುಕ್ತರಾಗಲು ಯಾವ ಉಪಾಯವೂ ಹೊಳೆಯಲಿಲ್ಲ. ಅಲ್ಲದೆ ತಮ್ಮ ಆತ್ಮವಿಶ್ವಾಸದ ಬಲದಿಂದ ಯಾವ ಕಂಪನಿಯಲ್ಲಾದರೂ ಹಣ ನಷ್ಟವಾಗದಂತೆ ನೋಡಿಕೊಂಡೇನೆಂಬ ಧೈರ್ಯವೂ ಇರಲಿಲ್ಲ.

ಅವರು ನಿರಾಶೆಯಿಂದ ಕೋಣೆ ಸುತ್ತುತ್ತಿರುವಾಗ ಆಳೊಬ್ಬ ಬಂದು ಹೇಳಿದ, "ಬರಾಳದ ಮಹಾರಾಣಿಯವರು ಚಿತ್ತೈಸಿದ್ದಾರೆ."

೨

ಲಾಲಾಸಾಯಿದಾಸರಿಗೆ ಆಶ್ಚರ್ಯವಾಯಿತು. ಬರಾಳದ ಮಹಾರಾಣಿಯವರು ಲಖನೌಗೆ ಬಂದು ಮೂರುನಾಲ್ಕು ದಿನಗಳಾಗಿದ್ದವು. ಪ್ರತಿಯೊಬ್ಬರ ಬಾಯಿಯಲ್ಲೂ ಅವರದೇ ಮಾತಾಗಿತ್ತು. ಕೆಲವರು ಅವರ ಉಡುಪಿಗೆ, ಕೆಲವರು ರೂಪಕ್ಕೆ, ಕೆಲವರು ಸ್ವಚ್ಛಂದವೃತ್ತಿಗೆ ಮರುಳಾಗಿದ್ದರು. ಅವರ ಬಗ್ಗೆ ಚರ್ಚೆ ನಡೆದಾಗ ಅವರ ದಾಸಿ, ಸೇವಕರ ಬಗ್ಗೆಯೂ ನಡುನಡುವೆ ಚರ್ಚೆಯಾಗುತ್ತಿತ್ತು.

ರಾಯಲ್ ಹೋಟಲಿನ ಎದುರಿಗೆ ಮಿತಿಮೀರಿ ಜನಸಂದಣಿ, ಮಹಾ

ರಾಣಿಯವರನ್ನು ನೋಡುವುದಕ್ಕಾಗಿ! ಅವರೆಲ್ಲಾದರೂ ಕಾರಿನಲ್ಲಿ ಹೊರಟರೂ ಜನರು ಹಿಂಬಾಲಿಸುತ್ತಿದ್ದರು. ಇಂತಹ ಮಹಾರಾಣಿಯವರು ದೊರೆತ ಮಹಾರಾಜರೆಷ್ಟು ಪುಣ್ಯವಂತರಾಗಿರಬೇಕು!

ಬರಾಳ ಉತ್ತರ ಹಿಂದುಸ್ತಾನದಲ್ಲಿ ನೇಪಾಳದ ಬದಿಯಲ್ಲಿ ಇಂಗ್ಲಿಷ ರಾಜ್ಯದಲ್ಲಿಯ ಒಂದು ಸಂಸ್ಥಾನವಾಗಿದ್ದಿತು. ಉಳಿದವರು ಅದೊಂದು ಶ್ರೀಮಂತ ಸಂಸ್ಥಾನವೆಂದು ಬಗೆಯುತ್ತಿದ್ದರೂ ಆ ಸಂಸ್ಥಾನದ ಆದಾಯ ಎರಡು ಲಕ್ಷಕ್ಕೆ ಹೆಚ್ಚಿರಲಿಲ್ಲ.

ಲಾಲಾಸಾಯಿದಾಸ ಕೂಡಲೆ ಕಪಾಟನಿಂದ ಒಂದು ರೇಶಿಮೆ ಸೂಟು ತೆಗೆದು ಧರಿಸಿ ಮತ್ತೆ ವಿರಾಮಾಸನದಲ್ಲಿ ಮಂಡಿಸಿದರು. ಬ್ಯಾಂಕಿನಲ್ಲಿಯ ಕಾರಕೂನರೂ ಸ್ತಂಭಿತರಾಗಿದ್ದರು. ಬಂಗಾಲಿ ಬಾಬುಗಳು ಮಹಾರಾಣಿಯವರನ್ನು ಸ್ವಾಗತಿಸುವದಕ್ಕೋಸುಗ ತಮ್ಮ ಕೋಣೆಯಿಂದ ಹೊರಕ್ಕೆ ಬಂದರು.

ಸಾಯಿದಾಸರು ಉತ್ತಮ ಉಡುಪಿನಲ್ಲಿದ್ದರೂ ಒಳಗೆ ಎದೆ ಡವಗುಟ್ಟುತ್ತಿತ್ತು. ಮಾತನಾಡುವಾಗ ತಪ್ಪದಂತೆ ಸಾವಧಾನದಿಂದ ಮಾತನಾಡಬೇಕೆಂದು ನಿಶ್ಚಯಿಸಿಕೊಂಡರು. ಏಕೆಂದರೆ ಮಹಾರಾಜ-ಮಹಾರಾಣಿಯವರೊಡನೆ ಭೆಟ್ಟಿಯಾಗುವ ಸಂದರ್ಭ ಅವರಿಗೆ ಅದೇ ಮೊದಲನೆಯದಾಗಿದ್ದಿತು. ತಾವು ಹೇಗೆ ಮಾತನಾಡಬೇಕು? ಮಾತನಾಡುವಾಗ ನಮ್ರತೆ ಎಷ್ಟು ಸಾಕು? ಯಾವ ವಿಷಯದ ಕಡೆಗೆ ಲಕ್ಷವೀಯಬೇಕು? ಮೊದಲಾದ ಕೆಲವು ಶಿಷ್ಟಾಚಾರಗಳು ಸಾಯಿದಾಸರಿಗಿನ್ನೂ ಸಂಪೂರ್ಣವಾಗಿ ಅವಗತವಾಗಿರಲಿಲ್ಲ.

ಒಮ್ಮಿಂದೊಮ್ಮೆ ಅವರ ದೃಷ್ಟಿ ಗಡಿಯಾರದ ಕಡೆಗೆ ಹೋಯಿತು. ಸಾಯಿದಾಸರ ಕೈಗಡಿಯಾರದಲ್ಲಿ ನಾಲ್ಕು ಹೊಡೆದಿದ್ದಿತು. ಆದರೆ ಅವರ ಹೆಡ್ ಆಫೀಸಿನ ಗಡಿಯಾರ ಎರಡು ಗಂಟೆಗೆ ನಿಂತುಹೋಗಿದ್ದಿತು. ಸಾಯಿ-ದಾಸ ಎದ್ದು ಗಡಿಯಾರ ಸರಿಪಡಿಸುವಷ್ಟರಲ್ಲಿ ಮಹಾರಾಣಿಯವರ ಸವಾರಿ ಹೆಡ್ ಆಫೀಸಿಗೆ ಚಿತ್ತೈಸಿತು. ಸಾಯಿದಾಸರು ಗಡಿಯಾರವನ್ನು ಅಲ್ಲಿಯೇ ಬಿಟ್ಟು ಸ್ವಾಗತಿಸುವುದಕ್ಕೆ ಬಾಗಿಲಿಗೆ ಹೋದರು. 'ಕೈಕುಲುಕಬೇಕೇ? ತಲೆವಾಗಬೇಕೇ?' ಎನ್ನುವ ಉಭಯಸಂಕಟದಲ್ಲಿ ಸಾಯಿದಾಸ ಬಿದ್ದಾಗ ಮಹಾರಾಣಿಯವರೇ ಕೈಮುಂದೆ ಮಾಡಿ ಪ್ರಶ್ನೆ ಬಗೆಹರಿಸಿದರು.

ಅಲ್ಲಿ ಬಂದಿದ್ದ ಎಲ್ಲ ಪ್ರತಿಷ್ಠಿತ ವ್ಯಕ್ತಿಗಳು ಚೌಕಗಳ ಮೇಲೆ ಕುಳಿತು ಕೊಂಡಾದ ಬಳಿಕ ಮಹಾರಾಣಿಯವರ ಪ್ರೈವೇಟ್ ಸೆಕ್ರೆಟರಿ ಮಾತುಕತೆ ಪ್ರಾರಂಭಿಸಿದ. ಮಹಾರಾಣಿಯವರ ಪ್ರಯತ್ನದಿಂದಾದ (ಮಹಾರಾಜರು ತೀರಿಕೊಂಡ ಬಳಿಕ) ಬರಾಳ ಸಂಸ್ಥಾನದ ಉನ್ನತಿಯನ್ನು ಮನದಟ್ಟಾಗು-ವಂತೆ ಬಣ್ಣಿಸಿದ. ಮುಂದೆ "ನೀರಾವರಿ ಯೋಜನೆಗೆಂದು ಹತ್ತು ಲಕ್ಷ ರೂಪಾಯಿಗಳ ಆವಶ್ಯಕತೆಯಿದೆ. ಆದರೆ ವ್ಯವಹಾರವನ್ನೆಲ್ಲ ಹಿಂದುಸ್ತಾನದ ಬ್ಯಾಂಕಿನೊಡನೆ ಮಾಡಲು ನಿರ್ಧರಿಸಿದ್ದೇವೆ. ಇನ್ನು ಹಣವನ್ನು ಕೊಡು ವುದು ಬಿಡುವುದು ನಿಮ್ಮನ್ನವಲಂಬಿಸಿದೆ" ಎಂದು ಹೇಳಿದ.

"ನಾವು ಕೊಡಬಹುದು. ಆದರೆ ಕಾಗದಪತ್ರಗಳನ್ನು ನೋಡದ ವಿನಾ ಏನು ತಾನೇ ಹೇಳಲಿಕ್ಕಾದೀತು?" ಬಂಗಾಲಿ ಬಾಬು ಹೇಳಿದರು.

" ತಾವು ಏನಾದರೂ ಹೊಣೆಯನ್ನಪೇಕ್ಷಿಸುತ್ತೀರಾ?" ಸೆಕ್ರೆಟರಿ ಕೇಳಿದ.

"ನಿಮ್ಮ ನಾಲಿಗೆಯೇ ಹೊಣೆಯಿದೆಯಿಲ್ಲ." ಸಾಯಿದಾಸ ಹೇಳಿದರು.

"ತಮ್ಮ ಹತ್ತಿರ ಸಂಸ್ಥಾನದ ಲೆಕ್ಕದ ಹೊತ್ತಿಗೆಯಿದೆಯೇ?" ಬಾಬು ಕೇಳಿದರು."

ಸಾಯಿದಾಸರಿಗೆ ತಮ್ಮ ಸಲಹೆಗಾರರ ಅವಿಶ್ವಾಸವನ್ನು ಕಂಡು ಕೆಡಕೆನಿ ಸಿತು. ಅವರೀಗ ಉದಾರತೆಯೇ ಮೂರ್ತಿವೆತ್ತಂತಿದ್ದರು. ಅದಕ್ಕೆ ಮಹಾ ರಾಣಿಯವರ ರೂಪವೂ ಕಾರಣವಾಗಿತ್ತು. ಈಗ ಅವರೆದುರು ಕಾಗದಪತ್ರದ ಮಾತನ್ನೆತ್ತಿದರೆ ಅದು ವ್ಯಾಪಾರೀ ವೃತ್ತಿಯೆನ್ನುತ್ತಿದ್ದರು.

ಹೆಣ್ಣುಮಕ್ಕಳೆದುರು ನಾವು ಶೀಲ ಹಾಗೂ ಸಂಕೋಚಗಳ ಮೂರ್ತಿ-ಮಂತ ಸ್ವರೂಪಗಳಾಗುವುದಿಲ್ಲವೇ? ಆದಕ್ಕಾಗಿಯೇ ಸಾಯಿದಾಸ ಕ್ರೂರ-ಕಠೋರ ದೃಷ್ಟಿಯಿಂದ ಬಾಬುಗಳನ್ನು ನೋಡುತ್ತ ನುಡಿದರು, "ನಮಗೆ ಕಾಗದಪತ್ರಗಳ ಆವಶ್ಯಕತೆಯಿಲ್ಲ. ವಿಶ್ವಾಸ ಮಾತ್ರ ಬೇಕು."

"ಡೈರೆಕ್ಟರರು ಒಪ್ಪಲಿಕ್ಕಿಲ್ಲ" ಬಾಬು ಹೇಳಿದರು.

"ಪರವಾ ಇಲ್ಲ. ನಾವು ನಮ್ಮ ಹೊಣೆಗಾರಿಕೆಯ ಮೇಲೆ ಕೊಡುತ್ತೇವೆ." ಸಾಯಿದಾಸ ಹೇಳಿದರು.

ಮಹಾರಾಣಿಯವರು ಸಾಯಿದಾಸರತ್ತ ಕೃತಜ್ಞತಾಪೂರ್ಣ ದೃಷ್ಟಿ-ಯಿಂದ ನಡುವೆ ಬಂದು ಮುಗುಳುನಗೆ ಎಳೆದು ತಂದು ನೋಡಿದರು.

೩

ಆದರೆ ಡೈರೆಕ್ಟರ ಮಂಡಲಿಗೆ ಲೆಕ್ಕಪತ್ರ ಗಳಿಕೆ-ಬಳಕೆ ನೋಡುವುದು ಆವಶ್ಯವೆನಿಸಿತು, ಹಾಗೂ ಈ ಕೆಲಸವೂ ಸಾಯಿದಾಸರ ಮೇಲೆಯೇ ಹೊರಿಸಲ್ಪಟ್ಟಿತು. ಸಾಯಿದಾಸರು ಮೂರು ನಾಲ್ಕು ದಿನಗಳ ವರೆಗೆ ಎಲ್ಲ ಪರೀಕ್ಷಿಸಿ ಅನುಕೂಲವೆಂದು ಬರೆದುಬಿಟ್ಟರು. ಕಾಗದ ಬರೆದುಕೊಟ್ಟಾಯಿತು. ಹಣ ಅವರ ಕೈಗೆ ಹೋಯಿತು. ನೂರಕ್ಕೆ ಒಂಬತ್ತರಂತೆ ಬಡ್ಡಿಯ ದರವೂ ಸ್ವೀಕರಿಸಲ್ಪಟ್ಟಿತು.

ಮೂರು ವರುಷಗಳ ವರೆಗೆ ಬ್ಯಾಂಕಿನ ವ್ಯವಸ್ಥೆಯಲ್ಲಿ ಉತ್ತಮ ಉನ್ನತಿಯಾಯಿತು. ಆರು ತಿಂಗಳಿಗೊಮ್ಮೆ ತಪ್ಪದೆ ಇಪ್ಪತ್ತೈದುಸಾವಿರ ರೂಪಾಯಿಗಳ ಗಂಟು ಬ್ಯಾಂಕನ್ನು ಸೇರುತ್ತಿದ್ದಿತು. ಇದರಿಂದ ವ್ಯವಹಾರಿಗಳಿಗೆ ನೂರಕ್ಕೆ ಐದರಂತೆ ಬಡ್ಡಿ ದೊರೆಯುತ್ತಿತ್ತು, ಪಾಲುಗಾರರಿಗೆ ಏಳರಂತೆ ಡೆವಿ-ಡೆಂಡ್ ದೊರೆಯುತ್ತಿತ್ತು.

ಸಾಯಿದಾಸರನ್ನು ಕಂಡರೆ ಎಲ್ಲರೂ ಮೆಚ್ಚುತ್ತಿದ್ದರು. ಪ್ರತಿಯೊಬ್ಬರೂ ಅವರ ಜಾಣತನದ ಪ್ರಶಂಸೆ ಮಾಡುತ್ತಿದ್ದರು. ಬಂಗಾಲಿ ಬಾಬುಗಳೂ ಒಮ್ಮೊಮ್ಮೆ ಸೋತುಹೋಗುತ್ತಿದ್ದರು. "ಬಾಬೂ, ನಂಬುಗೆ ಜಗತ್ತಿನಲ್ಲಿ ನಾಶವಾಗುವುದಿಲ್ಲ. ಸತ್ಯದ ಮೇಲೆ ವಿಶ್ವಾಸವಿಡುವುದು ಪ್ರತಿಯೊಬ್ಬ ಮನುಷ್ಯನ ಧರ್ಮ. ನಂಬುಗೆಯಿಲ್ಲದವನು ಜೀವಚ್ಛವದಂತೆ. ಆತನಿಗೆ ನಾಲ್ಕೂ ಬದಿಗೆ ವೈರಿಗಳಿದ್ದಂತೆಯೇ ತೋರುತ್ತದೆ. ಒಳ್ಳೊಳ್ಳೆಯ ಮಹಾತ್ಮರೂ ಆತನಿಗೆ ಗೋಮುಖವ್ಯಾಘ್ರರಂತೆ ಕಾಣುತ್ತಾರೆ. ನಿಜವಾದ ದೇಶಭಕ್ತರು ಆತನ ಕಣ್ಣಿಗೆ ಲಂಚಕೋರರಂತೆ ಕಾಣುತ್ತಾರೆ. ಇಷ್ಟೇ ಅಲ್ಲ, ಅವನ ಮನಸ್ಸಿನಿಂದ ದೇಶಪ್ರೀತಿ, ಧರ್ಮಪ್ರೀತಿಗಳೂ ಹಾರಿಹೋಗುತ್ತವೆ. ನಮ್ಮ ಆತ್ಮಗಳೆಲ್ಲ ಪವಿತ್ರವಾದವುಗಳು. ಯಾರ ಮೇಲೂ ಅವಿಶ್ವಾಸ ತೋರಬಾರದು. ಈ ಸಂಸಾರದಲ್ಲಿ ಕಪಟತನವಿಲ್ಲವೆಂದು ನಾನು ಹೇಳಲಾರೆ, ಅಧಿಕಾಂಶದಿಂದ

ಇದೆ. ಆದರೆ ಅದನ್ನು ತೆಗೆದುಹಾಕುವುದು ಅವಿಶ್ವಾಸ ತೋರಿಸುವುದರಿಂದಲ್ಲ, ಮಾನವ ಚರಿತ್ರೆಯ ಜ್ಞಾನದಿಂದ. ನಾನು ಮೋರೆ ನೋಡಿದೊಡನೆ ಅವರು ಯಾವ ಬಗೆಯ ಮನುಷ್ಯರೆಂಬುದನ್ನು ಹೇಳಬಲ್ಲೆ. ಯಾರು ಎಷ್ಟೇ ವೇಷ ಮಾರ್ಪಾಡು ಮಾಡಿದರೂ ನನ್ನ ಆಂತರಿಕ ದೃಷ್ಟಿಯನ್ನವರು ಮೋಸಗೊಳಿಸ ಲಾರರು. ವಿಶ್ವಾಸದಿಂದ ವಿಶ್ವಾಸ, ಅವಿಶ್ವಾಸದಿಂದ ಅವಿಶ್ವಾಸ ಹುಟ್ಟುತ್ತ-ವೆಂಬುದನ್ನು ಮರೆಯಕೂಡದು. ಇದು ಪ್ರಾಕೃತಿಕ ನಿಯಮವಾಗಿದೆ. ತಾವು ಪ್ರಾರಂಭದಿಂದಲೇ ಧೂರ್ತ ಕಪಟಿ ದುರಾಚಾರಿಯೆಂದು ಬಗೆದರೆ ಆತ ನಿಮ್ಮೊಡನೆ ಎಂದಿಗೂ ನಿಷ್ಕಪಟತನದಿಂದ ವ್ಯವಹಾರ ಮಾಡಲಾರ. ಆತನೆಷ್ಟೇ ದುರಾಚಾರಿಯಿದ್ದರೂ ಅಧರ್ಮಿಯಿದ್ದರೂ ನೀವು ಆತನಿಗೆ ವಿಶ್ವಾಸದ ಮದ್ದು ಕುಡಿಸಿ ಪುಣ್ಯಾತ್ಮನನ್ನು ಮಾಡಬಲ್ಲಿರಿ." ಎಂದು ಸಾಯಿದಾಸ ತಾಸುಗಟ್ಟಲೆ ಉಪನ್ಯಾಸವೀಯುತ್ತಿದ್ದರು.

೪

ನಾಲ್ಕನೆಯ ವರುಷದ ಮೊದಲನೆಯ ದಿನಾಂಕವಿದ್ದಿತು. ಸಾಯಿ-ದಾಸರು ತಮ್ಮ ಕೋಣೆಯಲ್ಲಿ ಕುಳಿತು ಅಂಚೆಯಾಳಿನ ಮಾರ್ಗಪ್ರತೀಕ್ಷಿಸು-ತ್ತಿದ್ದರು. 'ಇಂದು ಬರಾಳದಿಂದ ಇಪ್ಪತ್ತೈದುಸಾವಿರ ರೂಪಾಯಿಗಳು ಬರ ಬಹುದು. ಅವಶ್ಯ ಸಾಮಾನು ಕೊಂಡುಕೊಳ್ಳಬೇಕಾಗಿದೆ,' ಎಂದು ಸಾಯಿ ದಾಸರು ಯೋಚಿಸುತ್ತಿದ್ದರು. ಬ್ಯಾಂಕಿಗೆ ಅಲ್ಲಿಯ ವರೆಗೆ ಟೆಲಿಫೋನ್ ಇರ ಲಿಲ್ಲ. ಆದರ ಜಾಹಿರಾತನ್ನೂ ತರಿಸಿ ಆಗಿದ್ದಿತು. ಆಶೆಯ ಬಲದಿಂದ ಸಾಯಿದಾಸರ ಮೋರೆಯಲ್ಲಿ ನಗೆ ತುಳುಕುತ್ತಿದ್ದಿತು ಯಾರೊಡನೆ ಮಾತ ನಾಡಿದರೂ ಸಮಾಧಾನವಿಲ್ಲ.

ಅಂತೂ ಅಂಚೆಯಾಳು ಬಂದ. ಸಾಯಿದಾಸರು ತೆಗೆದುಕೊಳ್ಳುವು ದಕ್ಕೆ ಹೋದರು ಆತ ತನ್ನ ಚೀಲದಿಂದ ಎಷ್ಟೋ ರಿಜಿಸ್ಟ್ರಿ ಕಾಗದಗಳನ್ನು ತೆಗೆದ. ಆದರೆ ಅದರಲ್ಲಿ ಬರಾಳದ ಕಾಗದವೇ ಇಲ್ಲ!! ಸಾಯಿದಾಸ ಇನ್ನೊಮ್ಮೆ ಕಣ್ಣೋಡಿಸಿದರು. ಊಂ ಹೂಂ!! ಅವರಿಗೆ ನಿರಾಶೆಯಾದಂತಾಯಿತು.

'ಇನ್ನೂ ಏನಾದರೂ ಇವೆಯೇ ಎಂದು ಅಂಚೆಯಾಳನ್ನು ಕೇಳಲೇ?' ಎನ್ನಿಸಿತು. ಹೋಗಲಿ. ಅಂಚೆಯಾಳು ಹೊರಟ. ಮತ್ತೆ ನಿಲ್ಲಿಸಿ ಕೇಳಿದರು. "ಇನ್ನೂ ಏನಾದರೂ ಇವೆಯೇ ?"

"ಇಂಥ ವಿಷಯದಲ್ಲಿ ಮರೆತು ಉಳಿಯಬಹುದೇ? ಇನ್ನುಳಿದವರ ವಿಷಯದಲ್ಲಿ ಅಪ್ಪಿತಪ್ಪಿ ಉಳಿದೀತು. ಆದರೆ ತಮ್ಮ ವಿಷಯದಲ್ಲಿ ಉಳಿಸ ಲಾರೆ." ಅಂಚೆಯಾಳು ನಗುತ್ತ ಹೇಳಿದ.

ಸಾಯಿದಾಸರ ಮೋರೆಯೊಣಗಿತು. ಅಂಚೆಯಾಳು ಹೊರಟುಹೋದ. ಸಾಯಿದಾಸ ಬಂಗಾಲಿ ಬಾಬುವಿನೊಂದಿಗೆ ಹೇಳಿದರು, "ತಡವೇಕಾಗಿದ್ದೀತು? ಎಂದಿಗೂ ಹೀಗಾಗಿರಲಿಲ್ಲ"

"ಯಾವುದಾದರೂ ಕಾರಣದ ಮೂಲಕ ತಡವಾಗಿರಬಹುದು. ಹೆದ-ರುವ ಕಾರಣವಿಲ್ಲ." ನಿಷ್ಠುರ ಭಾವದಿಂದ ಬಾಬು ಹೇಳಿದರು.

ನಿರಾಶೆ ಅಸಂಭವವನ್ನು ಸಂಭವವನ್ನಾಗಿ ಮಾಡುತ್ತದೆ. ಸಾಯಿದಾಸರಿಗೆ ಪಾರ್ಸಲ್‌ನಿಂದ ಏಕೆ ಕಳುಹಿಸಬಾರದು? ಎನ್ನಿಸಿತು. ಇರಬಹುದು. ಆದರೆ ಇದನ್ನು ಪ್ರಕಟಗೊಳಿಸುವ ಸಾಹಸವಾಗಲಿಲ್ಲ. ಕೊನೆಗೆ ಬೇಸತ್ತು ಮನೆಗೆ ನಡೆದರು. ಇನ್ನು ಪತ್ರವನ್ನಾದರೂ ಬರೆಯಬೇಕು, ಇಲ್ಲವೆ ತಂತಿಯಿಂದಲಾದರೂ ತಿಳಿಸಬೇಕು. 'ಕೊಡಕೊಳ್ಳುವ ವ್ಯವಹಾರದಲ್ಲಿ ತಡಮಾಡಬಾರದು. ಅದು ವಿಶ್ವಾಸಘಾತವೆನಿಸುತ್ತದೆ. ಒಂದು ದಿನ ತಡವಾಗಿ ಬಂದರೂ ಬ್ಯಾಂಕಿಗೆ ಘಾತುಕವಾಗಬಲ್ಲದು' ಎಂದು ಕಾಗದ ಬರೆಯೋಣ ಎನ್ನಿಸಿತು. ಮತ್ತೆ ಏನೋ ವಿಚಾರ ಬಂದು ಬರೆಯಲೇ ಇಲ್ಲ.

ಸಂಜೆಯಾಯಿತು. ಕೆಲ ಗೆಳೆಯರು ಬಂದರು. ಹರಟೆಯೂ ಪ್ರಾರಂಭವಾಯಿತು. ಅಷ್ಟರಲ್ಲಿ ಸಂಜೆಯ ಅಂಚೆಯಾಳು ಬಂದು ಅಂಚೆ ಕೊಟ್ಟು ಹೋದ. ಸಾಯಿದಾಸ ದಿನಾಲು ವರ್ತಮಾನಪತ್ರ ಒಡೆಯುತ್ತಿದ್ದರು. ಆದರೆ ಇಂದು ಪತ್ರ ಒಡೆದರು. ಬರಾಳದ ಪತ್ರವಿರಲೇ ಇಲ್ಲ. ಕೊನೆಗೆ ಅನ್ಯಮನಸ್ಕರಾಗಿ ಒಂದು ಇಂಗ್ಲಿಷ ವೃತ್ತಪತ್ರಿಕೆ ಒಡೆದರು. ಅದರ ಮೊದಲ ಪುಟದಲ್ಲಿಯ ಲೇಖದ ಶೀರ್ಷಿಕೆಯನ್ನು ನೋಡಿಯೇ ಅವರ ರಕ್ತ ತಣ್ಣ-ಗಾಯಿತು.

'ನಿನ್ನೆ ಸಂಜೆ, ಮೂರು ದಿನಗಳಿಂದ ಬೇನೆಯಿಂದ ನರಳುತ್ತಿದ್ದ ಬರಾಳದ ಮಹಾರಾಣಿಯವರು ಕೈಲಾಸವಾಸಿಗಳಾದರು.' ಅದರ ಬದಿಗೆ ಒಂದು ಚಿಕ್ಕ ಟಿಪ್ಪಣಿಯೂ ಇದ್ದಿತು.

'ಬರಾಳದ ಮಹಾರಾಣಿಯವರ ಅಕಾಲಮೃತ್ಯು ಅವರ ಸಂಸ್ಥಾನಕ್ಕಷ್ಟೇ ಅಲ್ಲ, ಎಲ್ಲ ಪ್ರಾಂತಗಳಿಗೊಂದು ದುಃಖಜನಕ ಘಟನೆಯಾಗಿದೆ. ಒಳ್ಳೊಳ್ಳೆಯ ಭಿಷಗಾಚಾರ್ಯರು, ಡಾಕ್ಟರರು ಪ್ರಯತ್ನಿಸಿದರೂ ಉಳಿಸುವುದು ಸಾಧ್ಯವಾಗಲಿಲ್ಲ. ರಾಣಿಯವರಿಗೆ ಯಾವಾಗಲೂ ತಮ್ಮ ಸಂಸ್ಥಾನದ ಚಿಂತೆ ಇರುತ್ತಿದ್ದಿತು. ಅವರ ಅಲ್ಪಕಾಲದ ಆಳಿಕೆಯಲ್ಲಾದ ಸುಧಾರಣೆಗಳನ್ನು ನಾವು ಮರೆಯುವೆವೇ? ತಮ್ಮ ರಾಜ್ಯವು ಎರಡನೆಯವರ ಕೈಗೆ ಹೋಗುವುದೆಂಬುದನ್ನು ಅರಿತಿದ್ದರೂ ಅವರು ಕರ್ತವ್ಯಪಾಲನೆಯನ್ನು ಮರೆಯಲಿಲ್ಲ. ಶಾಸನಾನುಸಾರವಾಗಿ ಅವರಿಗೆ ಸಂಸ್ಥಾನದ ಹೊಣೆಯಿಂದ ಸಾಲ ತೆಗೆದುಕೊಳ್ಳಲು ಬರುತ್ತಿರಲಿಲ್ಲ. ಆದರೂ ಪ್ರಜೆಗಳ ಹಿತಕ್ಕಾಗಿ ಅವರು ತೆಗೆದುಕೊಳ್ಳಬೇಕಾಯಿತು. ಇನ್ನೂ ನಾಲ್ಕೈದು ವರ್ಷ ಬದುಕಿದ್ದರೆ ಸಾಲ ತೀರಿಸಬಹುದಿತ್ತು. ಆದರೆ ಈ ಅಕಾಲಮೃತ್ಯು ಅದನ್ನು ಸಾಧ್ಯಮಾಡಗೊಡಲಿಲ್ಲ. ಈ ಸಾಲದ ಪರಿಣಾಮವೇನಾಗುವುದೋ ನೋಡಬೇಕು. ಆದರೆ ಹೊಸ ಮಹಾರಾಜರು ಸಾಲ ತೀರಿಸಲು ನಿರಾಕರಿಸುತ್ತಾರೆಂದು ನಮಗೆ ಅಧಿಕೃತ ರೀತಿಯಿಂದ ತಿಳಿದುಬರುತ್ತದೆ. ಇದರಿಂದ ದೊಡ್ಡ ಗೊಂದಲವೇಳಬಹುದೆಂದು ನಮಗೆ ಅನಿಸುತ್ತದೆ.'

ಲಾಲಾಸಾಯಿದಾಸರು ವರ್ತಮಾನಪತ್ರವನ್ನು ಮೇಜಿನ ಮೇಲಿಟ್ಟು ನಿರಾಶೆಯ ಅಂತಿಮ ಆಶ್ರಯವಾದ ಆಕಾಶದ ಕಡೆಗೆ ನೋಡಿದರು. ಉಳಿದ ಗೆಳೆಯರೂ ಇದನ್ನು ಓದಿದರು. ಚರ್ಚೆಯೂ ಆಯಿತು. ಸಾಯಿದಾಸರಿಗೆ ನಾಲ್ಕೂ ದಿಕ್ಕುಗಳಿಂದ ಬೈಗಳೂ ಬರತೊಡಗಿದವು. ಎಲ್ಲ ದೋಷವೂ ಅವರ ಪಾಲಿಗೇ ಬಂದಿತು. ಅವರ ಚಿರಕಾಲದ ಕಾರ್ಯಕುಶಲತೆ ದೂರದೃಷ್ಟಿಗಳು ಮಣ್ಣಲ್ಲಿ ಹೂತು ಹೋದವು.

ಬ್ಯಾಂಕಿಗೆ ಇಂತಹ ದೊಡ್ಡ ಹಾನಿಯನ್ನು ಸಹಿಸುವುದು ಅಸಾಧ್ಯದ ಮಾತಾಗಿದ್ದಿತು. ಇನ್ನು ಅದರ ಜೀವರಕ್ಷಣೆಯ ಬಗೆ ಹೇಗೆ?

ನಗರದಲ್ಲಿ ಈ ಸುದ್ದಿ ಹಬ್ಬುತ್ತಲೇ ಎಲ್ಲರೂ ರೂಪಾಯಿ ತೆಗೆದುಕೊಳ್ಳಲು ಆತುರರಾಗಿ ಬ್ಯಾಂಕಿಗೆ ಓಡಾಡತೊಡಗಿದರು. ಮುಂಜಾವದಿಂದ ಸಂಜೆಯ ವರೆಗೆ ಹಣ ತೆಗೆದುಕೊಳ್ಳುವವರ ಗಡಿಬಿಡಿ ನಡೆದೇ ಇದ್ದಿತು. ಯಾರೂ ಸಮಾಧಾನ ಹೇಳಿದರೂ ಕೇಳಲಿಲ್ಲ. ಪತ್ರಿಕೆಯ ಸಂಪಾದಕನ ಲೇಖನಿ ಎಂತಹದು!

ಸಾವಕಾಶವಾಗಿ ಕೆಲಸ ಸಾಗಿದ್ದರೆ ಕೆಲಸ ಸುಸೂತ್ರವಾಗಿ ಸಾಗುತ್ತಿತ್ತು. ಆದರೆ ಭಯಂಕರ ಬಿರುಗಾಳಿಯಲ್ಲಿ ಯಾವ ನೌಕೆ ತಾನೇ ಸ್ಥಿರವಾಗಿ ನಿಂತೀತು? ಕೊನೆಗೆ ಬ್ಯಾಂಕಿನ ಕ್ಯಾಷರುಗಳೆಲ್ಲ ನಿಟ್ಟುಸಿರು ಬಿಡುವಂತಾಯಿತು.

ಮೂರು ದಿನಗಳು ಕಳೆದವು. ಬ್ಯಾಂಕಿನೆದುರು ಸಾವಿರಾರು ಜನ ನೆರೆದಿದ್ದರು. ಬ್ಯಾಂಕಿನ ಬಾಗಿಲಿಗೆ ಸಶಸ್ತ್ರ ಪೋಲೀಸರ ಕಾವಲು ಇದ್ದಿತು. ಜನ ಸಂದಣಿಯಲ್ಲಿ ನಾನಾ ಪ್ರಕಾರದ ಅಪವಾರ್ತೆಗಳು ಹುಟ್ಟುತ್ತಿದ್ದವು. ಒಮ್ಮೊಮ್ಮೆ ಸಾಯಿದಾಸ ವಿಷಪ್ರಾಶನ ಮಾಡಿದರೆಂದು ಸುದ್ದಿ ಹಬ್ಬುತ್ತಿತ್ತು.

ಒಮ್ಮೊಮ್ಮೆ ಡೈರೆಕ್ಟರುಗಳು ತಾವಾಗಿಯೇ ಹೊರಗೆ ಬರುತ್ತಿದ್ದಾರೆ ಎಂಬ ಸುದ್ದಿ ಹಬ್ಬುತ್ತಿತ್ತು. ಕೊನೆಗೆ ಒಮ್ಮಿಂದೊಮ್ಮೆ ಒಂದು ಮೋಟರ್ ಕಾರು ಬಂದು ರಸ್ತೆಯ ಮೇಲೆ, ಜನಸಂದಣಿಯ ಬಳಿ ನಿಂತುಕೊಂಡಿತು. "ಬರಾಳ ಮಹಾರಾಜರ ಕಾರು," ಎಂದು ಒಬ್ಬ ಕೂಗಿದ. ಕೂಡಲೆ ಜನರೆಲ್ಲ ಹೋಗಿ ಮೋಟರನ್ನು ಮುತ್ತಿದರು.

ಮಹಾರಾಜ ಜಗದೀಶಸಿಂಹರು ಮಹಾರಾಣಿಯವರ ಮೃತ್ಯುವಿನ ತರುವಾಯ ವಕೀಲರ ಸಲಹೆಗೋಸುಗ ಲಖನೌ ನಗರಕ್ಕೆ ಬಂದಿದ್ದರು. ಕೆಲ ಸರಕನ್ನು ಕೊಳ್ಳುವುದೂ ಇದ್ದಿತು. ಆ ಮೋಟರು ಕಾರು ಅಂದೇ ಕೊಂಡುದಾಗಿತ್ತು. ಈ ಗದ್ದಲವನ್ನು ನೋಡಿ ನಾಟಕವಿರಬಹುದೆಂದು ಬಗೆದು ಕಾರು ನಿಲ್ಲಿಸಿ ಕೇಳಿದರು, "ಇಲ್ಲಿ ತಾವೇತಕ್ಕೆ ನಿಂತಿದ್ದೀರಿ? ಏನಾದರೂ ನಾಟಕವಿದೆಯೇನು?"

"ಹೌದು, ಒಂದು ದೊಡ್ಡ ನಾಟಕವಿದೆ," ಒಬ್ಬ ಮಹಾಶಯ ಹೇಳಿದ.

"ಏನಾದರೂ?" ಜಗದೀಶಸಿಂಹ ಕೇಳಿದರು.

"ದೈವದ ನಾಟಕ" ಮಹಾಶಯ ಉತ್ತರವಿತ್ತ.

ಮಹಾರಾಜರಿಗೆ ಈ ಉತ್ತರ ಕೇಳಿ ಆಶ್ಚರ್ಯವಾಯಿತು. ಆದರೂ ಕೂಡ ಲಖನೌ ಜನಗಳು ಮಾತಿನಲ್ಲಿ ಧ್ವಾತು ತೆಗೆಯುತ್ತಾರೆಂಬುದನ್ನು ಸ್ಮರಿಸಿ ಅದೇ ರೀತಿಯಿಂದ ಪ್ರಶ್ನೆ ಮಾಡಿದರು, "ದೈವದ ಆಟ ನೋಡಬೇಕಾ ದರೆ ಇಲ್ಲಿಗೆ ಬರುವ ಆವಶ್ಯಕತೆಯಿಲ್ಲವಷ್ಟೇ?"

"ತಾವು ಹೇಳುವುದು ನಿಜ. ಆದರೆ ಉಳಿದೆಡೆಗಳಲ್ಲಿ ಇಂತಹ ಮೋಜು ಎಲ್ಲಿ?" ಇಲ್ಲಿ ಮುಂಜಾವದಿಂದ ಸಂಜೆಯ ವರೆಗೆ ದೈವ ಅದೆಷ್ಟು ಸಿರಿವಂತ ರನ್ನು ನಿರ್ಧನರನ್ನಾಗಿ ಮಾಡಿತು! ಬಡವರನ್ನು ತಿರುಕರನ್ನಾಗಿಮಾಡಿತು!! ಮುಂಜಾವದಲ್ಲಿ ಅರಮನೆಗಳಲ್ಲಿ ಕುಳಿತವರಿಗೆ ಈಗ ಗಿಡಗಳ ನೆಳಲೂ ದುಸ್ತರ. ಆ ಮೋಜುಗಳನ್ನು ನೋಡಲು ನೀವೂ ಬರುತ್ತೀರಾ?"

"ನೀವೆಲ್ಲ ಅಲಂಕಾರಿಕವಾಗಿ ಹೇಳುತ್ತಿದ್ದೀರಿ. ಅದನ್ನು ತಿಳಿಯು ವಷ್ಟು ಜ್ಞಾನ ನನಗಿಲ್ಲ ನನಗಷ್ಟು ಚೆನ್ನಾಗಿ ತಿಳಿಸಿಹೇಳಬಾರದೇ?"

"ಇದು ನ್ಯಾಷನಲ್ ಬ್ಯಾಂಕು. ಇದೀಗ ದಿವಾಳಿ ತೆಗೆದಿದೆ. ಹೆಚ್ಚಿ ಗೇನು ಹೇಳ ವುದು?"

ಮಹಾರಾಜರು ಅವನ ಕಡೆಗೆ ನೋಡಿ ಗುರುತಿಸಿ ಕಾರಿನಿಂದ ಹೊರಗೆ ಬಂದು ಕೈಕುಲುಕಿಸಿ ಹೇಳಿದರು, ಓ ನಸೀಮ್, ನೀನು ಇಲ್ಲಿಯೆಲ್ಲಿ? ನಿನ್ನನ್ನು ನೋಡಿ ಆನಂದವಾಯಿತು.

ನಸೀಮ್ ಜಗದೀಶಸಿಂಹರೊಡನೆ ಡೆಹರಾಡೂನ್ ಕಾಲೇಜದಲ್ಲಿ ಕಲಿಯುತ್ತಿದ್ದ. ಇಬ್ಬರೂ ಕೂಡಿಯೇ ಡೆಹ್ರಾಡೂನ್‌ದ ಬೆಟ್ಟಗಳ ಮೇಲೆ ಅಲೆಯುತ್ತಿದ್ದರು. ಆದರೆ ಮುಂದೆ ಜಗದೀಶಸಿಂಹರು ಮನೆಯ ಗೊಂದಲ ದಲ್ಲಿ ಕಾಲೇಜ ಬಿಟ್ಟರು. ಮುಂದೆ ಇವರ ಭೆಟ್ಟಿಯೇ ಆಗಲಿಲ್ಲ. ನಸೀಮ್ ಅವರು ಲಖನೌಗೆ ಬರುವ ಒಂದೆರಡು ತಿಂಗಳು ಪೂರ್ವದಲ್ಲಿಯೇ ಬಂದು ಮನೆಮಾಡಿಕೊಂಡಿದ್ದ.

"ಆನಂದ ನೀವು ಗುರುತಿಸಿದಿರಿ. ಎಲ್ಲವೂ ಸೌಖ್ಯ ತಾನೇ? "

"ನಿಜವಾಗಿ ಹೇಳುತ್ತೇನೆ. ನಿನ್ನನ್ನು ಬಹಳ ಸಲ ಜ್ಞಾಪಿಸಿದೆ. ನಾನು

ರಾಯಲ್‌ಹೋಟೆಲ್‌ನಲ್ಲಿ ಇಳಿದುಕೊಂಡಿದ್ದೇನೆ ಇಂದು ಬಾ. ಸ್ವಲ್ಪ ಹರಟೆ ಹೊಡೆಯೋಣ."

"ಹರಟೆಯೆಲ್ಲ ನ್ಯಾಷನಲ್ ಬ್ಯಾಂಕಿನೊಡನೇ ತೊಳೆದುಹೋಯಿತು. 'ನಾಳೆ'ಯ ಚಿಂತೆ ಕಾಡುತ್ತಿದೆ. ತಮ್ಮ ಕೃಪಾಪ್ರಸಾದ. ಇನ್ನು ತಮ್ಮ ಬಾಗಿಲಿಗೆ ಬಂದು ಮುಷ್ಕರ ಮಾಡುವುದೊಂದು ಉಳಿದಿದೆ."

"ನಿನ್ನದೇ ಮನೆಯಿದೆ, ಬೇಕಾದಾಗ ಬಾ. ಈಗಲೆ ಸಡೆಯುಲ್ಲ ನಾನು ನಿರಾಕರಿಸುವುದರಿಂದ ಇಷ್ಟು ಹಾನಿಯಾದೀತೆಂಬುದನ್ನು ನಾನು ಕನಸಿನಲ್ಲಿಯೂ ಎಣಿಸಿರಲಿಲ್ಲ ಬ್ಯಾಂಕು ನಿಮ್ಮನ್ನೆಲ್ಲ ಫಕೀರರನ್ನು ಮಾಡಿತೆಂದು ತೋರುತ್ತದೆ."

"ಮನೆ ಮನೆಗೆ ಬೆಂಕಿ ಹತ್ತಿದಂತಾಗಿದೆ. ನನಗೆ ಉಹಲು ಬಟ್ಟೆಯಿಲ್ಲ ಈಗ."

ಅಷ್ಟರಲ್ಲಿ ಪಂಡಿತಮಹಾಶಯರೊಬ್ಬರು ಬಂದು, "ಮಹಾಶಯರೇ, ನಾನು ರಾಘೋಜಿ ಪಾಠಶಾಲೆಯಲ್ಲಿ ಶಿಕ್ಷಕನಾಗಿದ್ದೇನೆ. ಪಾಠಶಾಲೆಯ ಹಣವೆಲ್ಲ ಇದೇ ಬ್ಯಾಂಕಿನಲ್ಲಿದ್ದಿತು. ಐವತ್ತು ವಿದ್ಯಾರ್ಥಿಗಳು ಇದರ ಆಶ್ರಯದಲ್ಲಿ ಊಟ ಮಾಡಿಕೊಂಡು ಸಂಸ್ಕೃತ ಓದುತ್ತಿದ್ದರು. ನಾಳೆ ಪಾಠಶಾಲೆ ಮುಚ್ಚಲೇ ಬೇಕಾಗುವುದು. ದೂರದೂರದ ವಿದ್ಯಾರ್ಥಿಗಳಿದ್ದಾರೆ. ಅವರು ತಮ್ಮ ಮನೆ ಹೇಗೆ ಮುಟ್ಟುತ್ತಾರೋ ದೇವರೇ ಬಲ್ಲ," ಎಂದು ಹೇಳಿದರು.

ಪಂಜಾಬೀ ರುಮಾಲು ಧರಿಸಿ ಕಾನಪುರದ ಜೋಡು ಧರಿಸಿದ ಮಹಾಶಯನೊಬ್ಬ ಬಂದು, "ಮಹಾಶಯ, ಈ ಬ್ಯಾಂಕಿನ ದಿವಾಳಿಯಿಂದ ಎಷ್ಟೋ ಸಂಸ್ಥೆಗಳು ಬುಡಮೇಲಾದವು. ಲಾಲಾ ದೀನಾನಾಥರ ಹೆಸರಿನಲ್ಲಿ ನಡೆಯುತ್ತಿದ್ದ ಅನಾಥಾಲಯದ ಒಂದು ಲಕ್ಷ ರೂಪಾಯಿಗಳು ನುಂಗಿಹೋದವು. ನಾನು ಡೆಪ್ಯುಟೇಶನ್‌ನಿಂದ ಹಿಂದಿರುಗಿ ಹದಿನೈದು ದಿನಗಳಾದವು. ಹದಿನೈದು ಸಾವಿರ ರೂಪಾಯಿ ಅನಾಥಾಲಯದ ಹೆಸರಿನಿಂದ ತುಂಬಿದ್ದೆ. ಆದರೆ ಒಂದು ಒಡಕು ಕಾಸೂ ಸಿಕ್ಕುವಂತಿಲ್ಲ" ಎಂದು ಹೇಳಿದ.

ಮುದುಕನೊಬ್ಬ ಬಂದು, "ಸಾಹೇಬ, ನನ್ನ ಜೀವನದಲ್ಲಿಯ ಗಳಿಕೆಯೆಲ್ಲ ನಾಶವಾಗಿಹೋಯಿತು," ಎಂದು ಹೇಳಿದ.

ಸಾವಕಾಶವಾಗಿ ಜನವು ಒಂದೆಡೆಗೆ ಕೂಡಿ ಹರಟೆಹೊಡೆಯಲಾರಂಭಿಸಿದರು. ಪ್ರತಿಯೊಬ್ಬ ತನ್ನ ಬದಿಯವನಿಗೆ ತನ್ನ ಕರುಣಕತೆ ಹೇಳತೊಡಗಿದ. ಮಹಾರಾಜ ಜಗದೀಶಸಿಂಹರು ಅರೆತಾಸಿನ ವರೆಗೆ ನಸೀಬ್‌ನೊಡನೆ ನಿಂತು ಈ ಎಲ್ಲ ಜನರ ವಿಪತ್ಕಥೆಗಳನ್ನು ಕೇಳುತ್ತಿದ್ದರು. ಕೊನೆಗೆ ಮೋಟರಿನಲ್ಲಿ ಕುಳಿತು ಹೊರಟೊಡನೆಯೇ ನೆಲದ ಮೇಲೆ ಜೋಲುಮೋರೆ ಮಾಡಿಕೊಂಡು ಕುಳಿತವನೊಬ್ಬ ಕಂಡ. ಈತ ಜಗದೀಶಸಿಂಹರ ಬಾಲ್ಯಸ್ನೇಹಿತನಾಗಿದ್ದ. ಇಬ್ಬರೂ ಕೂಡಿಯೇ ಆಡಿದ್ದರು, ಮರವೇರಿದ್ದರು, ಹಕ್ಕಿಗಳ ಮರಿಗಳನ್ನು ಕದ್ದಿದ್ದರು. ಜಗದೀಶಸಿಂಹ ಡೆಹರಾಡೂನ್‌ಗೆ ಹೊರಟೊಡನೆ ಈ ಹುಡುಗ—ಶಿವದಾಸ—ತನ್ನ ತಂದೆಯೊಡನೆ ಲಖನೌಗೆ ಬಂದಿದ್ದ. ಆತ ನೀಗ ಇಲ್ಲಿ ಹಾಲಿನ ಅಂಗಡಿ ತೆರೆದಿದ್ದ. ಜಗದೀಶಸಿಂಹ ಅವನನ್ನು ಗುರುತಿಸಿ ಕೂಗಿದರು, "ಶಿವದಾಸ, ಬಾಯಿಲ್ಲಿ,"

ಶಿವದಾಸನಿಗೆ ಕೂಗು ಕೇಳಬಂತು. ಆದರೆ ಆತ ಮೊರೆಯೆತ್ತಲಿಲ್ಲ. ಕುಳಿತಲ್ಲಿಂದಲೇ ಮಹಾರಾಜರ ಕಡೆಗೆ ನೋಡಿದ. ಆತನಿಗೂ ತನ್ನ ಬಾಲ್ಯದ ಸವಿನೆನಹುಗಳ ನೆನಪಾಯಿತು. ಆತನಿಗೆ ಜಗದೀಶಸಿಂಹ ತನ್ನನ್ನು ಮರೆತಿರಬಹುದು ಎನ್ನಿಸಿತ್ತು. ಆದರೆ ಕೂಗಿದೊಡನೆ ಆನಂದವಾಯಿತು. ಮತ್ತೆ ಬಡತನವನ್ನು ತೋರಬಾರದೆಂಬ ಭಾವನೆಯಿಂದ ಹಾಗೆಯೇ ಕುಳಿತುಬಿಟ್ಟ. ಕೊನೆಗೆ ಜಗದೀಶಸಿಂಹರೇ ಮೋಟರಿನಿಂದ ಇಳಿದು ಬಂದು ಕೇಳಿದರು, "ಶಿವದಾಸ, ನನ್ನನ್ನು ಮರತೆಯೇನು?"

ಈಗ ಮಾತ್ರ ಶಿವದಾಸನಿಗೆ ತನ್ನ ಮನೋವೇಗವನ್ನು ತಡೆಯಲಾಗಲಿಲ್ಲ. ಅವನ ಕಣ್ಣು ತುಂಬಿಬಂದವು. ಜಗದೀಶಸಿಂಹರನ್ನಪ್ಪಿ ಹೇಳಿದ, "ಮರೆತಿಲ್ಲ. ಆದರೆ ತಮ್ಮೆದುರು ಬರಲು ಸಂಕೋಚ."

"ಇಲ್ಲಿ ಹಾಲಿನ ಅಂಗಡಿ ತೆರೆದಿದ್ದೀಯಲ್ಲವೇ? ನನಗೆ ಗೊತ್ತಿರಲಿಲ್ಲ ಬಿಡು. ನಡೆ, ಕಾರಿನಲ್ಲಿ ಕೂಡ್ರು. ಹೋಟಲಿನ ವರೆಗೆ ನಡೆ ನನ್ನ ಮನಸ್ಸು ನಿಮ್ಮೊಡನೆ ಮಾತನಾಡಲೆಳಸುತ್ತದೆ. ನಿಮ್ಮನ್ನು ಬರಾಳಕ್ಕೆ ಕರೆದುಕೊಂಡು ಹೋಗುತ್ತೇನೆ. ಇನ್ನೊಮ್ಮೆ ಚಿಣಿಫಣಿಯಾಟ ಆಡೋಣಂತೆ."

"ಹಾಗೆ ಮಾಡಬಾರದು, ನೋಡಿದವರು ನಕ್ಕಾರು. ನಾನು ಹೋಟಲಿಗೆ ಬರುವೆ. ಅಲ್ಲಿಯೇ ರಾಯಲ್ ಹೋಟಲಿನಲ್ಲಿ ಇಳಿದಿದ್ದೀರಲ್ಲವೆ?"

"ಅವಶ್ಯವಾಗಿ ಬರುವೆಯಷ್ಟೇ?"

"ತಾವು ಕರೆದರೆ ಇಲ್ಲೆನ್ನಲಾದೀತೇ?"

"ಇಲ್ಲಿ ಏಕೆ ಕುಳಿತಿದ್ದೀ? ಅಂಗಡಿ ನಡೆದಿದೆಯಲ್ಲವೇ?"

"ಮುಂಜಾನೆಯ ವರೆಗೆ ನಡೆದಿತ್ತು. ಮುಂದೆ ಮುಚ್ಚಿದೆ."

"ನೀನೂ ಬ್ಯಾಂಕಿನಲ್ಲಿ ರೂಪಾಯಿಗಳನ್ನಿಟ್ಟಿದ್ದಿಯೇನು?"

"ಬಂದಾಗ ಹೇಳುವೆ."

ಮಹಾರಾಜ ಜಗದೀಶಸಿಂಹರು ಮೋಟರಿನಲ್ಲಿ ಕುಳಿತು ಡ್ರೈವರನಿಗೆ ಹೇಳಿದರು, "ಹೋಟಲಿಗೆ ತೆಗೆದುಕೊಂಡು ಹೋಗು"

"ತಾವು ವ್ಹೈಟ್‌ವೇ ಕಂಪನಿಯ ಅಂಗಡಿಗೆ ಹೋಗಲು ಆಜ್ಞೆಯಿತ್ತಿದ್ದಿರಲ್ಲ."

"ಈಗ ಅಲ್ಲಿ ಹೋಗುವುದಿಲ್ಲ."

"ಜೇಕಬ್ ಬ್ಯಾರಿಸ್ಟರ್ ಕಡೆಗೂ ಬೇಡವೇ?"

"ಎಲ್ಲಿಯೂ ಬೇಡ. ನೆಟ್ಟಗೆ ಹೋಟಲಿಗೆ ಒಯ್ದುಬಿಡು." ನಿರಾಶೆಯ ಹಾಗೂ ವಿಪತ್ತುಗಳ ಈ ದೃಶ್ಯಗಳು ಜಗದೀಶಸಿಂಹರ ಮನಸ್ಸಿನಲ್ಲಿ, 'ಈಗ ನನ್ನ ಕರ್ತವ್ಯವೇನು?' ಎಂಬ ಪ್ರಶ್ನೆಯನ್ನು ಹುಟ್ಟಿಸಿದುವು.

## ೬

ಇಂದಿಗೆ ಏಳು ವರುಷದ ಮೊದಲು ಬರಾಳದ ಮಹಾರಾಜರು (ಪೂರ್ವದ) ತಮ್ಮ ತಾರುಣ್ಯದಲ್ಲಿಯೇ ಕುದುರೆಯ ಮೇಲಿನಿಂದ ಬಿದ್ದು ತೀರಿಕೊಂಡರು. ಪಟ್ಟದ ಉತ್ತರಾಧಿಕಾರದ ಪ್ರಶ್ನೆ ಬಂದಿತು. ಮಹಾರಾಜರಿಗೆ ಮಕ್ಕಳಿರದ ಕಾರಣ ಅವರ ಕಕ್ಕನ ಮಗ ರಾಮಸಿಂಹರಿಗೆ ಹಕ್ಕು ಮುಟ್ಟುತ್ತಿದ್ದಿತು. ಅವರು ಕಟ್ಟಳೆ ಹೂಡಿದರು. ಆದರೆ ನ್ಯಾಯಾಲಯದಲ್ಲಿ ಮಹಾರಾಣಿಯವರೇ ಹಕುದಾರರೆಂದು ನಿರ್ಣಯವಾಯ್ತು. ರಾಮಸಿಂಹ ಠಾಕೂರರು ಅಪೀಲು ಮಾಡಿದರು, ಪ್ರಿವ್ಹಿಕೌನ್ಸಿಲ್ ವರೆಗೆ ಹೋದರು; ನಿಷ್ಫಲವಾಯಿತು ಇಷ್ಟಾಗುವು

ದರಲ್ಲಿ ಲಕ್ಷಗಟ್ಟಲೆ ರೂಪಾಯಿಗಳು ಹೋದವು. ಆಸ್ತಿಯನ್ನೂ ಮಾರಬೇಕಾಯಿತು. ಆದರೆ ಸೋತರೂ ಸುಮ್ಮನಿರಲಿಲ್ಲ. ಯಾವಾಗಲೂ ವಿಧವೆ ರಾಣಿಯವರಿಗೆ ಚುಚ್ಚುಮಾತುಗಳನ್ನಾಡುತ್ತಿದ್ದರು. ಅವಳ ಮೇಲೆ ಎಷ್ಟೋ ತೊಂದರೆಗಳನ್ನು ತಂದೊಡ್ಡುತ್ತಿದ್ದರು. ಆದರೂ ಅವರು ಧಿಟ್ಟೆ ಸ್ತ್ರೀಯುರಿರುವುದರಿಂದ ಅವುಗಳಿಗೆ ಸೊಪ್ಪುಹಾಕಲಿಲ್ಲ. ಹೀಗೆ ಸೊಪ್ಪು ಹಾಕದೆ ಇರುವುದಕ್ಕೆ ಎಷ್ಟೋ ರೂಪಾಯಿಗಳನ್ನು ವೆಚ್ಚಮಾಡಬೇಕಾಗುತ್ತಿತ್ತು. ಅದಕ್ಕಾಗಿ ಮೇಲಿಂದ ಮೇಲೆ ಸಾಲತೆಗೆಯಬೇಕಾಗುತ್ತಿತ್ತು.

ಜಗದೀಶಸಿಂಹರು ಬಾಲ್ಯದಿಂದ ಸಲಿಗೆಯಲ್ಲಿ ಬೆಳೆದವರು. ಆದರೆ ತಂದೆ ರಾಮುಸಿಂಹ ಕಟ್ಟಳೆಗಳಿಂದ ಬೇಸತ್ತು, ಮಹಾರಾಣಿಯವರು ತಮ್ಮ ಮಗನನ್ನು (ಜಗದೀಶಸಿಂಹ) ಕೊಲ್ಲಿಸಬಹುದೆಂಬ ಹೆದರಿಕೆಯಿಂದ ಡೆಹರಾ-ಡೂನ್‌ದಲ್ಲಿ ಆನಂದದಿಂದ ಇದ್ದರು. ಆದರೆ ಕಾಲೇಜದ ಕಟ್ಟೆ ಹತ್ತುವಷ್ಟರಲ್ಲಿ ತಂದೆ ತೀರಿಕೊಂಡರು. ಅವರಿಗೆ ಕಾಲೇಜ್ ಬಿಡಬೇಕಾಗಿ ಬಂತು. ಮುಂದೆ ಬರಾಳಕ್ಕೆ ಬಂದರು. ತಲೆಯ ಮೇಲೆ ಕುಟುಂಬ ಸಾಗಿಸುವ ಹೊಣೆಗಾರಿಕೆಯೂ ಬಿದ್ದಿತು. ಅಲ್ಲದೆ ರಾಮುಸಿಂಹರ ಚಿರಂಜೀವರಲ್ಲವೇ? ಅಂದ ಬಳಿಕ ಮಹಾರಾಣಿಯವರಿಗೆ ತೊಂದರೆ ಕೊಡದೆ ಬಿಟ್ಟಾರೇ? ಹೀಗಾಗಿ ಮಹಾರಾಣಿಯವರು ಮೂರು ತಿಂಗಳುಗಳ ವರೆಗೆ ತೊಂದರೆ ಅನುಭವಿಸಬೇಕಾಯಿತು. ಮುಂದೆ ಮೂರು ವರುಷಗಳಾದ ಬಳಿಕ ಸಾವುಕಾರರ ಕಾಟ ಪ್ರಾರಂಭವಾಯಿತು. ಅವರ ನಿರ್ದಯ ಮಾತುಗಳಿಂದ ಎದೆ ಚೂರಾಗುತ್ತಿತ್ತು. ಜಗದೀಶಸಿಂಹರು ಭಾವಿಕ ಪುರುಷರಾಗಿದ್ದರು ತಮ್ಮ ನೆರೆಹೊರೆಯವರ ದೀನಸ್ಥಿತಿಗೆ ಅವರ ಎದೆ ಕರಗಿ ನೀರಾಗುತ್ತಿತ್ತು. ಆದಕ್ಕೇ ಅವರ ಬಾಯಿಯಿಂದ ಒಮ್ಮೊಮ್ಮೆ ಸಂಪ್ಯವಾದದ ಮಾತುಗಳು ಹೊರಬೀಳುತ್ತಿದ್ದವು.

ಆದರೆ ಮಹಾರಾಣಿಯವರ ಮೃತ್ಯುವಿನ ಬಳಿಕ ಕೈಗೆ ಹತ್ತಿದ ಧನ ಸಂಪತ್ತಿ ಅವರ ತತ್ವವನ್ನೂ ಭಾವಿಕತೆಯನ್ನೂ ಸಮೂಲ ನಾಶಮಾಡಿತು. ಆತ್ಮನಿದರ್ಶನೆಯ ಶಕ್ತಿ ನಾಶವಾಯಿತು. ಶತ್ರುಗಳಂತಿದ್ದವರು ಮಿತ್ರರಾದರು. ನಿಜವಾದ ಹಿತೈಷಿಗಳಾಗಿದ್ದವರು ಶತ್ರುಗಳಂತೆ ಕಾಣತೊಡಗಿದರು. ಸಾಮ್ಯವಾದ ಗಾಳಿಯಲ್ಲಿ ತೂರಿಹೋಯಿತು. ಎದೆಯಲ್ಲಿ ಅಸಹಿಷ್ಣುತೆ ಹಬ್ಬಿತು.

ಮೊದಲು ತ್ಯಾಗದ ಮೂರ್ತಿಗಳಾಗಿದ್ದ ಜಗದೀಶಸಿಂಹ ಈಗ ಭೋಗದ ಮೂರ್ತಿಗಳಾದರು.

ಆದರೂ ಕೂಡ ಸಾಮ್ಯವಾದದ ವಿಚಾರದ ಕೆಲವು ಅಂಶ ಅವರಲ್ಲಿ ಉಳಿದುಕೊಂಡಿದ್ದಿತು. ಆದರೆ ವಿಚಾರ ವ್ಯವಹಾರಕ್ಕೆ ಹೆದರುತ್ತಿತ್ತು.

ಆದರೆ ಇಂದು ಅವರು ಬ್ಯಾಂಕಿನ ಎದುರು ನೋಡಿದ ದೃಶ್ಯ ಅವರ ಕರುಳನ್ನು ಇರಿದು ಅವರಲ್ಲಿಯ ದಯಾಭಾವವನ್ನು ಜಾಗೃತಗೊಳಿಸಿತು. ಆಗ ಅವರಿಗೆ ತಾವು ಒಂದು ನಾವೆಯಲ್ಲಿ ಕುಳಿತಂತೆಯೂ ಇನ್ನೊಂದು ದಡದಲ್ಲಿ ಒಂದು ಹೆಣ ಸುಡುತ್ತಿರುವಂತೆಯೂ ಆದರ ಸುತ್ತಲೂ ಕೆಲವು ಜನರು ಕುಳಿತು ಅಳುತ್ತಿರುವಂತೆಯೂ ಬಳಿಕ ತಾವೂ ಹೋಗಿ ಅವರೊಂದಿಗೆ ಕೂಡಿಕೊಂಡಂತೆಯೂ ಅವರು ಭಾವಿಸಿದರು.

ರಾತ್ರಿ ಹತ್ತುಗಂಟೆಯಾಗಿದ್ದಿತು. ಜಗದೀಶಸಿಂಹ ಮಂಚದ ಮೇಲೆ ಮಲಗಿದ್ದರು. ಅವರ ಕಣ್ಣುಗಳ ಮುಂದೆ ಬ್ಯಾಂಕಿನ ಬವಣೆಯು ಭಯಂಕರವಾದ ನೃತ್ಯ ನಾಟ್ಯವಾಡುತ್ತಿದ್ದಿತು. ಆ ಕರುಣ ಕ್ರಂದನ ಅವರ ಕಿವಿಗೆ ಬೀಳುತ್ತಿತ್ತು. ಈ ಎಲ್ಲ ಬವಣೆಗೆ ನಾನೇ ಕಾರಣನಿರಬಹುದೇ? ಎಂಬುದೊಂದು ಪ್ರಶ್ನೆ ಅವರ ಮನಸ್ಸಿನಲ್ಲಿ ಉದ್ಭವಿಸಿತು. 'ಆದರೆ ಇದು ನನ್ನ ತಪ್ಪಲ್ಲ. ಸಂಪೂರ್ಣವಾಗಿ ಆಧಾರವಿಲ್ಲದೆ ಸಾಲವನ್ನು ಕೊಟ್ಟದ್ದು ಬ್ಯಾಂಕಿನ ಸಂಚಾಲಕರ ತಪ್ಪು. ಎರಡನೆಯವರ ತಪ್ಪು ನಾನೇಕೆ ಸುಧಾರಿಸಬೇಕು? ಆದರೆ.... ನಾನೇನೆ ದಿನಕ್ಕೆ ನಾಲ್ವತ್ತು ರೂಪಾಯಿಯ ಊಟ ಉಣ್ಣಬೇಕು? ನನಗೆ ಮೊಕಮಲ್ಲಿನ ಹಾಸುಗೆ ಏಕೆ? ಇದೇ ರೀತಿಯಿಂದ ಹಣವುಳಿಸಿ ಹತ್ತುಹನ್ನೆರಡು ಸಾವಿರ ರೂಪಾಯಿಗಳಲ್ಲಿ ಒಂದು ದೊಡ್ಡ ಬಾವಿ ಕಟ್ಟಿಸಿದ್ದರೆ! ಈ ಮೋಟರು ಕಾರು ವ್ಯರ್ಥ ಗಂಟೆ ಅರ್ಧಗಂಟೆಗಾಗಿ ತಿಂಗಳಿಗೆ ಇನ್ನೂರು ರೂಪಾಯಿ ವೆಚ್ಚ ಮಾಡುವದೆಂದರೇನು? ಉಳಿದ ಸಂಸ್ಥಾನಿಕರು ಹೀಗೆ ಮಾಡುತ್ತಿದ್ದರೆ ಮಾಡಲಿ. ನಾನೇಕೆ ಹೀಗೆ ಮಾಡಬೇಕು? ನಾನು ಯಾವ ಕೆಲಸವನ್ನೂ ಮಾಡುವುದೇ ಇಲ್ಲ ಪರಿಶ್ರಮ ಮಾಡುವವರಿಗೆ ಆದಕ್ಕೆ ತಕ್ಕಂತೆ ಫಲ ದೊರೆಯಲೇಬೇಕು. ಈ ವಿಲಾಸಗಳು ನನ್ನನ್ನು ಪ್ರಜೆಗಳಿಂದ ದೂರಮಾಡುತ್ತಿವೆ.

ನಾನು ಪಟ್ಟಕ್ಕೆ ಬರುವ ಮೊದಲು ಈ ಸುವರ್ಣಸಂಧಿಗಾಗಿ ಎಷ್ಟೊಂದು

ತವಕದಿಂದ ಕಾಯುತ್ತಿದ್ದೆ! ಆದರೆ ಅದು ಈಗ ತಾನಾಗಿಯೇ ಹಸ್ತಗತವಾಗಿ-ರುವಾಗ ಅದನ್ನು ಹೇಗೆ ಬಿಡಲಿ? ಇರುವಾಗ ಮಹಾರಾಣಿ ನನ್ನನ್ನು ಬಹುಪರಿಯಿಂದ ಕಾಡಿದಳು. ಈಗ ತೀರಿಕೊಂಡಮೇಲೂ ಸಂಸ್ಥಾನದ ರೂಪದಿಂದ ಕಾಡುತ್ತಿದ್ದಾಳೆ. ಎಂತೆಂತಹ ಸ್ತ್ರೀಮುಗಳಿಂದಲೂ ಪ್ರಯೋಜನವಾಗಲೊಲ್ಲದು. ನಾನು ಬಡವನಾದರೂ ಅದರಲ್ಲೇನು ನಷ್ಟ? ರಾಣಾಪ್ರತಾಪನಿದ್ದಿರಲಿಲ್ಲವೆ? ಅಲ್ಲದೆ ನಮ್ಮ ಜಾತಿ ಉಳಿದುದು ಆತನ ಆತ್ಮಸಮರ್ಪಣೆಯಿಂದಲ್ಲವೆ? ಶ್ರೀರಾಮಚಂದ್ರನು ಸುಖಭೋಗದಲ್ಲಿ ಕಾಲಕಳೆದಿದ್ದರೆ ನಾವೇಕೆ ಆತನನ್ನು ನೆನೆಯುತ್ತಿದ್ದೆವು? ನಮ್ಮ ಪ್ರತಿಷ್ಠೆ ಧನವನ್ನೂ ವಿಲಾಸವನ್ನೂ ಅವಲಂಬಿಸಿಲ್ಲ. ನಾನು ಮೋಟರು ಕಾರಿನಲ್ಲಿ ತಿರುಗಾಡಿದರೇನೇ ನಿಜವಾದ ಮಹಾರಾಜನೇನು? ನನ್ನಿಂದ ಸಾವಿರಾರು ಜನರ ಹಿತವಾಗುವಂತಿದ್ದರೆ ನಾನೇಕೆ ಮಾಡಬಾರದು? ನನ್ನ ಸುಖಭೋಗ ನನ್ನ ಪ್ರಜೆಗಳಿಗೆ ವಿಷವಿದ್ದಂತೆ; ನನ್ನ ಆತ್ಮಸಂಯಮ ಅವರಿಗೆ ಅಮೃತವಿದ್ದಂತೆ. ನಾನು ಅಮೃತವಾಗುವಂತಿದ್ದರೆ ವಿಷವೇಕಾಗಬೇಕು? ನಾನು ವರುಷಗಟ್ಟಲೆ ಪರೋಪಕಾರ ಸಿದ್ಧಾಂತಗಳ ಬ.ಗ್ಗೆ ಕಲಿತ ಪಾಠಗಳ ಉಪಯೋಗವೇನಾಯಿತು? ನಾನು ನನ್ನ ವಿವೇಕ ಬುದ್ಧಿಯನ್ನು ಕೊಲ್ಲಲಾರೆ. ನಾನು ರಜಪೂತ ವೀರನಲ್ಲವೆ? ಪರ-ಮಾತ್ಮಾ, ನನ್ನ ಈ ಕರ್ಮದಿಂದ ಶ್ರೇಷ್ಠವಾದ ನಮ್ಮ ಜಾತಿಯನ್ನು ಅವ-ಮಾನಗೊಳಿಸಬೇಡ. ಇಲ್ಲ, ಎಂದಿಗೂ ಇಲ್ಲ. ಈ ಕತ್ತು ಸ್ವಾರ್ಥಕ್ಕೆ ಬಗ್ಗಲಾರದು. ನಾನು ರಾಮ, ಭೀಷ್ಮ, ಪ್ರತಾಪರ ವಂಶಜನು. ಶರೀರದ ದಾಸನಾಗಲಾರೆ,' ಎಂಬುದಾಗಿ ಜಗದೀಶಸಿಂಹ ಮನಸ್ಸಿನಲ್ಲಿ ಯೋಚಿಸುತ್ತಿ-ದ್ದರು.

ಕೊನೆಗೆ ಅವರಿಗೇ ಅನ್ನಿಸಿತು, 'ನಾನೀಗ ವಿಚಾರದ ಅತ್ಯುಚ್ಚ ಶಿಖರವನ್ನು ಮುಟ್ಟಿದ್ದೇನೆ.' ಮನಸ್ಸು ಅಭಿಮಾನದಿಂದ ತುಂಬಿಕೊಂಡಿತು. ಮತ್ತೆ ಮೈಯೆಲ್ಲ ಕಂಪಿಸಿತು.

ಆದರೆ ನನ್ನ ಮನೆಯವರು ಇದಕ್ಕೆ ಒಪ್ಪಬಹುದೇ? ಅವರು ಒಪ್ಪದಿ-ದ್ದರೆ ನನ್ನ ಆಶೆಗಳನ್ನೆಲ್ಲ ಬೆಂಕಿಯಲ್ಲಿ ಹೋಮಮಾಡಬೇಕಾಗುವುದಲ್ಲವೇ? ನಾನು ನನ್ನ ಆತ್ಮದ ಒಡೆಯ.' ಮತ್ತೆ ಜಗದೀಶಸಿಂಹರ ಮನಸ್ಸಿನಲ್ಲಿ ಯೋಚನಾಪ್ರವಾಹ ಹರಿಯತೊಡಗಿತು.

ಯೋಚಿಸುವುದಾರೂ ಎಷ್ಟು? ಕೊನೆಗೆ ಅವರು ನಿದ್ದೆ ಬಾರದೆ ಬೇಸತ್ತು, ಮಂಚದಿಂದ ಆಕಳಿಸುತ್ತ ಎದ್ದು ಕೋಣೆಯಲ್ಲಿ ತಿರುಗಾಡ ತೊಡಗಿದರು. ಕೊನೆಗೆ ಅದಕ್ಕೂ ಬೇಸತ್ತು ಕೋಣೆಯ ಬಾಗಿಲು ಇಕ್ಕಿ ಕೊಂಡು ಹೊರಹೊರಟರು. ನಾಲ್ಕೂ ಕಡೆಗೆ ಕತ್ತಲು ಕವಿದಿದ್ದಿತು. ಜಗದೀಶಸಿಂಹ ಸ್ವಲ್ಪ ಮುಂದೆ ಹೋದೊಡನೆ ಗೋಮತಿ ನದಿ. ಮುಂದೆ ಸಾವ ಕಾಶವಾಗಿ ದಡದ ಬಳಿ ಬಂದು ಮಳಲಿನ ಮೇಲೆ ತಿರುಗಾಡತೊಡಗಿದರು.

'ನನ್ನ ವ್ಯಯ ಕಡಿಮೆಮಾಡಿದರೆ ನನ್ನ ಸಂಸ್ಥಾನದ ಉಳಿತಾಯ ಹೆಚ್ಚುವುದು. ಉಳಿತಾಯ ಹೆಚ್ಚಿದರೆ ಬ್ಯಾಂಕಿನ ಸಾಲವನ್ನೂ ತೀರಿಸ ಬಹುದು. ಸಾವಿರ ಜನರಿಗೆ ಸಹಾಯವನ್ನಾದರೂ ಮಾಡಿದಂತಾಯಿತು. ಸಂಸ್ಥಾನದ ಲಾಯದಲ್ಲಿ ಇಪ್ಪತ್ತು ಮಾತ್ರ ಕುದುರೆಗಳು ಇವೆ, ಸಾಕಲ್ಲ. ಇನ್ನು ಮಹೇಶಗಂಜದ ಪೇಟೆಯಲ್ಲಿ ವ್ಯಾಪಾರ ಪ್ರಾರಂಭಿಸಿದರೆ ಕಡಿಮೆ ಯೆಂದರೂ ವರುಷಕ್ಕೆ ಹತ್ತು ಸಾವಿರ ರೂಪಾಯಿಗಳ ಲಾಭವಾಗುವುದು. ಈ ಮಿತವ್ಯಯ ಜೀವನ ಸಾವಿತ್ರಿಗೆ ಸೇರದಿದ್ದರೆ ಅವಳಿಗೆ ಈ ಸಂಸ್ಥಾನದಲ್ಲಿ ಅರ್ಧ ಭಾಗ ಕೊಟ್ಟು ಆಡಳಿತೆ ನಡಿಸಹೇಳುವೆ. ಅವಳು ರಾಣಿಯಾಗಬಹುದು. ಆದರೆ ನಾನು ಮಾತ್ರ ರಾಜನಾಗಲಾರೆ.'

ಒಮ್ಮಿಂದೊಮ್ಮೆ ಜಗದೀಶಸಿಂಹರಿಗೆ ಹಿಂದಿನಿಂದ, "ರಾಮನಾಮ ಸತ್ಯ ವಾಗಿಹುದಯ್ಯ" ಎಂಬ ಪಲ್ಲವಿ ಕೇಳಿಸಿತು. ಕೆಲ ಜನರು ಒಂದು ಹೆಣವನ್ನು ತರುತ್ತಿದ್ದರು. ಬಳಿಕ ದಡದ ಮೇಲೆ ಕಟ್ಟಿಗೆಯೊಟ್ಟಿ ಚಿತೆ ಹೊತ್ತಿಸಿದರು. ಇಬ್ಬರು ಹೆಣ್ಣು ಮಕ್ಕಳು ಎದೆ ಕರಗುವಂತೆ ರೋದಿಸುತ್ತಿದ್ದರು. ಆದರೆ ಈ ವಿಲಾಪದ ಪ್ರಭಾವ ಮಹಾರಾಜರ ಮನಸ್ಸಿನ ಮೇಲಾಗಲಿಲ್ಲ. ತಾವು ಇಷ್ಟು ಕಲ್ಲೆದೆಯವರಾದರೆಂದು ಅವರಿಗೆ ನಾಚಿಕೆಯಾಗುತ್ತಿದ್ದಿತು. 'ಒಬ್ಬ ಬಡ ಮಾನವನ ಹೆಣ ಉರಿಯುತ್ತಿದೆ. ಹೆಣ್ಣು ಮಕ್ಕಳು ಅಳುತ್ತಿದ್ದಾರೆ. ಆದರೆ ನನಗೆ ಸ್ವಲ್ಪವೂ ಕರುಣೆ ಬರುವುದಿಲ್ಲವಲ್ಲ?'

ಹೆಣ್ಣುಮಗಳೊಬ್ಬಳು ಎದೆ ಎದೆ ಬಡಿದುಕೊಂಡು ಅಳುತ್ತಿದ್ದಳು, "ಹಾಯ್! ನನ್ನ ರಾಜಾ! ನಿಮಗೆ ವಿಷ ಹೇಗೆ ಸಿಹಿ ಹತ್ತಿತು?" ಈ ಹೃದಯ ವಿದಾರಕ ವಿಲಾಪವನ್ನು ಕೇಳಿ ಮಹಾರಾಜರ ಎದೆ 'ಧಕ್' ಎಂದಿತು; ಕಣ್ಣು ತುಂಬಿ ಬಂದವು; 'ಅಯ್ಯೋ ಅವರಿಗೆ ವಿಷ ಹೇಗೆ ಸಿಹಿ ಹತ್ತಿದ್ದೀತು? ಎಷ್ಟಹ

ಕರುಣೆ! ಆಶ್ಚರ್ಯ!! ದುಃಖ!!! ವಿಷವೆಂದಾದರೂ ಸಿಹಿ ಹತ್ತಬಹುದೇ? ಆತನ ಮೇಲೆ ಯಾವುದಾದರೂ ತೊಂದರೆ ಒದಗಿರಬಹುದೆ?'

ಜಗದೀಶಸಿಂಹರಿಗೆ ಅಲ್ಲಿ ನಿಲ್ಲಲಾಗಲಿಲ್ಲ. ಕೂಡಲೆ ಅಲ್ಲಿ ನಿಂತಿದ್ದ ಒಬ್ಬ ಮನುಷ್ಯನನ್ನು ಕೇಳಿದರು, "ಬಹಳ ದಿನಗಳಿಂದ ಬಳಲುತ್ತಿದ್ದರೇನು?"

"ಎಲ್ಲಿಯದು? ಇಂದು ಮಧ್ಯಾಹ್ನವೇ ಏನೋ ಓದಿಕೊಂಡು ಎಲ್ಲಿಯೋ ಹೋಗಿಬಂದರು. ಬಂದವರೇ ಮಲಗಿಕೊಂಡರು. ವೈದ್ಯರನ್ನು ಕರೆದುಕೊಂಡು ಬರುವಷ್ಟರಲ್ಲಿ ಮೈ ತಣ್ಣಗಾಗಿತ್ತು. ವೈದ್ಯರು ಬಂದು ವಿಷಪ್ರಾಶನದಿಂದಲೇ ತೀರಿಕೊಂಡಿರಬಹುದೆಂದು ನಿರ್ಧರಿಸಿದರು. ಏಕೆಂದರೆ ಅವರಂತಹ ಮನುಷ್ಯ ನನ್ನು ಲಖನೌ ನಗರದಲ್ಲಿಯೇ ನೋಡಿಲ್ಲವಂತೆ."

"ವಿಷ ತೆಗೆದುಕೊಂಡುದಕ್ಕೆ ಕಾರಣವೇನಾದರೂ ತಿಳಿಯಿತೋ?"

"ಮಹಾಶಯ, ಏನಾಯಿತೋ ಗೊತ್ತಿಲ್ಲ. ಆದರೆ ಬ್ಯಾಂಕಿನ ದಿವಾಳಿ ಯಾದಂದಿನಿಂದ ಅವರು ಉದಾಸರಾಗಿಯೇ ಇದ್ದರು. ಸಾವಿರಾರು ರೂಪಾಯಿ ಗಳನ್ನು ಬ್ಯಾಂಕಿನಲ್ಲಿ ಇಟ್ಟಿದ್ದರೆಂದು ತೋರುತ್ತದೆ. ಇದೇ ನಗರದಲ್ಲಿ ಹಾಲಿನ ದೊಡ್ಡ ಅಂಗಡಿಯಿತ್ತು. ನಾವು ಬ್ಯಾಂಕಿನಲ್ಲಿ ಹಣ ಇಡಬೇಡಿರೆಂದು ಎಷ್ಟೋ ಸಲ ಹೇಳಿದ್ದೆವು. ಆದರೆ ಕೇಳಿರಲಿಲ್ಲ. ಬ್ಯಾಂಕು ಮುಳುಗಿಹೋಯಿತು. ಏನು ತಿಂದನೋ ದೇವರೇ ಬಲ್ಲ."

'ಶಿವದಾಸನಲ್ಲವಷ್ಟೇ?' ಜಗದೀಶಸಿಂಹರ ಮನಸ್ಸಿನಲ್ಲಿ ಸಂಶಯ ವುಂಟಾಯಿತು. ಕೇಳಿದರು, "ಆತನ ಹೆಸರು ಶಿವದಾಸನೆಂದು ಅಲ್ಲವಷ್ಟೇ?"

ಆ ಮನುಷ್ಯ ವಿಸ್ಮಯದಿಂದ ಹೇಳಿದ, "ಅಹುದು, ಅದೇ ಹೆಸರು. ತಮಗೆ ಗುರುತಿದ್ದಿತೇ?"

"ಹೌದು. ನಾನು ನನ್ನ ಬಾಲ್ಯದಲ್ಲಿ ಬಹು ದಿನಗಳ ವರೆಗೆ ಆತನೊಡನೆ ಆಟವಾಡಿದ್ದೆ. ಅಲ್ಲದೆ ಇಂದು ಮಧ್ಯಾಹ್ನ ನಾನು ಆತನಿಗೆ ಬ್ಯಾಂಕಿನ ಬಳಿ ಬೆಟ್ಟಿಯಾಗಿದ್ದೆ."

ಆ ಮನುಷ್ಯನು ತೀಕ್ಷ್ಣದೃಷ್ಟಿಯಿಂದ ಅವರನ್ನು ನಿರೀಕ್ಷಿಸಿದ. ಹಾಗೂ ಓಡುತ್ತ ಓಡುತ್ತ ಹೆಣ್ಣುಮಕ್ಕಳ ಬಳಿ ಹೋಗಿ ಹೇಳಿದ, "ಸುಮ್ಮನಾಗಿರಿ,

ಬರಾಳದ ಮಹಾರಾಜರು ಬಂದಿದ್ದಾರೆ." ಇಷ್ಟು ಹೇಳುವಷ್ಟರಲ್ಲಿ ಶಿವದಾಸನ ತಾಯಿ ಅಳುತ್ತ ಮಹಾರಾಜರ ಪಾದಮೂಲದಲ್ಲಿ ಬಿದ್ದು, ಎದ್ದು ಹೇಳಿದಳು, "ಮಗೂ, ಬಾಲ್ಯದಲ್ಲಿ ನೀನು ಆತನನ್ನು ಅಣ್ಣ ಎಂದು ಕರೆಯುತ್ತಿದ್ದೆಯಲ್ಲವೇ?........" ಗಂಟಲು ತುಂಬಿಬಂದಿತು.

ಜಗದೀಶಸಿಂಹ ಕಂಬನಿ ಸುರಿಸುತ್ತಲೇ ಇದ್ದರು. ಶಿವದಾಸ ಎದುರಿಗೆ ನಿಂತು ಕೇಳುತ್ತಿದ್ದ. "ಮಿತ್ರನಾಗಿಯೂ ಕೂಡ ನನ್ನ ಪ್ರಾಣ ತೆಗೆದುಕೊಂಡೆಯಲ್ಲ!!"

೭

ಬೆಳಗಾಯಿತು. ಆದರೆ ಜಗದೀಶಸಿಂಹರಿಗಿನ್ನೂ ನಿದ್ದೆ ಬಂದಿರಲಿಲ್ಲ. ಗೋಮತಿ ದಡದಿಂದ ಹಿಂದಿರುಗಿದ ವೇಳೆಯಿಂದ ಅವರ ಮನಸ್ಸು ವೈರಾಗ್ಯವನ್ನು ಹೊಂದಿದ್ದಿತು. ಆ ಕಾರುಣ್ಯಜನಕ ದೃಶ್ಯವು ಅವರ ಸ್ವಾರ್ಥದ ಕಲ್ಪನೆಗಳನ್ನು ಒಡೆದು ಚೂರು ಮಾಡಿದ್ದಿತು. ಸಾವಿತ್ರಿಯ, ಮಕ್ಕಳ, ಇಲ್ಲವೆ ತಾಯಿಯ ವಿರೋಧದ ಅಂಜಿಕೆಯೂ ಅವರಿಗುಳಿಯಲಿಲ್ಲ. ಯಾರು ಕೋಪಾವಿಷ್ಟರಾದರೂ ಕೂಡ ನಾನು ನನ್ನ ಮಾತನ್ನು ಹಿಂದಿರುಗಿ ತೆಗೆದುಕೊಳ್ಳಲಾರೆ. ಒಬ್ಬ ಶಿವದಾಸನಂತಹ ಮಿತ್ರನಿಗೋಸುಗ ನಾನು ಇಂತಹ ಅನೇಕ ಸಂಸ್ಥಾನಗಳನ್ನು ತ್ಯಜಿಸಬಲ್ಲೆ. ಸಾವಿತ್ರಿಗೆ, ಮಕ್ಕಳಿಗೆ, ನನಗೆ, ತಿರುಪೆ ಬೇಡುವ ಪ್ರಸಂಗ ಬಂದೊದಗಿದರೂ ಇನ್ನೊಬ್ಬರ ಕತ್ತು ಮಾತ್ರ ಹಿಸುಕಲಾರೆ. ಈಗ ತಡಮಾಡಲಾರೆ ಈ ದಿವಾಳಿ ಏನು ಮಾಡೀತು? ಏನ್ನ ಮಾಡಲಿಕ್ಕಿಲ್ಲ? ನಾನೇಕೆ ಇಷ್ಟು ಹಿಂದುಮುಂದೆ ನೋಡಬೇಕು? ಇದು ಆತ್ಮ ನಿರ್ಬಲತೆ. ಇದೇನು ಕಠಿಣವಾದ ಕೆಲಸವಲ್ಲ. ನಾನು ಕರ್ತವ್ಯಚ್ಯುತನಾಗಲಾರೆ. ಏನಾದರೂ ಚಿಂತೆಯಿಲ್ಲ.

ಜಗದೀಶಸಿಂಹ ಗಂಟೆ ಬಾರಿಸಿದರು. ಒಬ್ಬ ಆಳು ಕಣ್ಣು ಹೊಸೆಯುತ್ತ ಬಂದ. ಜಗದೀಶಸಿಂಹ ಹೇಳಿದರು, "ಈಗ ಜೇಕಬ್ ಸಾಹೇಬರ ಬಳಿ ಹೋಗು. ಬೇಗ ಬಾ ಎಂದು ತಿಳಿಸು. ಬೇಡ, ಈ ಪತ್ರ ಕೊಡು. ಮೋಟರು ಸಿದ್ಧ ಇಡುವಂತೆ ಹೇಳು."

೮

ಬ್ಯಾರಿಸ್ಟರ್ ಜೇಕಬ್ ಸಾಹೇಬರು ಹೀಗೆ ಮಾಡಬಾರದಾಗಿ ವಿಧ-ವಿಧದಿಂದ ಬೋಧಿಸಿದರು, "ಇನ್ನೂ ಎಷ್ಟು ವ್ಯವಹಾರಗಳಿವೆಯೋ ಯಾರಿಗೆ ಗೊತ್ತು? ನೀನು ಅವುಗಳನ್ನೆಲ್ಲ ತೀರಿಸುತ್ತ ಹೋಗುವಿಯೇನು?" ಆದರೆ ಜಗದೀಶಸಿಂಹ ಅವಿಚಲರಾಗಿದ್ದರು.

ಮರುದಿನ ವೃತ್ತಪತ್ರಿಕೆಗಳಲ್ಲಿ ಪ್ರಕಟವಾಗಿ ಬಂತು, "ಬರಾಳದ ಮಹಾರಾಜರು ಸಾಲ ತೀರಿಸುವವರಿದ್ದಾರೆ."

ಇದು ಪ್ರಸಿದ್ಧವಾಗುತ್ತಲೇ ಮತ್ತೆ ಲಖನೌ ನಗರದಲ್ಲಿ ಕೋಲಾಹಲವೆದ್ದಿತು. ಕೆಲವರಂತೂ ಇದರಲ್ಲಿ ಏನಾದರೂ ಮೋಸವಿರಬೇಕೆಂದರು. ಆದರೆ ಬ್ಯಾಂಕಿನ ಬಡ ಪಾಲುಗಾರರು ಆಶೀರ್ವಾದವೀಯುತ್ತಿದ್ದರು.

ಒಂದು ವಾರದ ವರೆಗೆ ಜಗದೀಶಸಿಂಹರಿಗೆ ತಲೆಯೆತ್ತಲಾಗಲಿಲ್ಲ. ಬ್ಯಾ. ಜೇಕಬ್‌ರ ವಿಚಾರಸರಣಿ ಸತ್ಯವೆಂದು ಸಿದ್ಧವಾಯಿತು. ದಿನಾಲು ಪ್ರೋನೋಟುಗಳ ಪುಡಿಕೆಗಳನ್ನು ಹಿಡಿದುಕೊಂಡು ಜನರು ಬರತೊಡಗಿದರು. ಅಂಗಡಿಯವರೂ ತಮ್ಮ ತಮ್ಮ ಬಿಲ್ಲುಗಳನ್ನು ಕಳಿಸತೊಡಗಿದರು.

ಕೊನೆಗೆ ತಾರೀಖು ತೀರಿಹೋದ ಪ್ರಾಮಿಸರಿ ನೋಟುಗಳನ್ನು ರದ್ದು ಎಂದು ತಿಳಿಸಿಬಿಟ್ಟರು. ಆದರೂ ಕೊಡುವುದು ಹತ್ತೊಂಬತ್ತು ಲಕ್ಷಕ್ಕೆ ಕಡಿಮೆಯಾಗಲಿಲ್ಲ.

ಒಂದು ದಿನ ಜಗದೀಶಸಿಂಹ ನ್ಯಾಷನಲ್ ಬ್ಯಾಂಕಿಗೆ ಹೋದರು. ಬ್ಯಾಂಕು ತೆರೆದಿದ್ದಿತು. ಸತ್ತವನಿಗೆ ಜೀವ ಬಂದಂತಾಗಿತ್ತು. ಹಣ ತೆಗೆದುಕೊಳ್ಳುವವರ ಸಂಖ್ಯೆಯೂ ಬಲವಾಗಿತ್ತು. ಆದರೆ ಜನರಲ್ಲಿ ಆನಂದ ಮನೆಮಾಡಿಕೊಂಡಿತ್ತು. ಜಗದೀಶಸಿಂಹರನ್ನು ನೋಡುತ್ತಲೇ ಎಲ್ಲರೂ ನಮಸ್ಕರಿಸಿದರು. ಅವರು "ತಮ್ಮ ಹೇಳಿಕೆ ಬ್ಯಾಂಕನ್ನು ಪುನರುಜ್ಜೀವನಗೊಳಿಸಿತು. ಬಂಗಾಲಿ ಬಾಬು ಹೇಳುತ್ತಿದ್ದರು, 'ಸಾಯಿದಾಸ ಜಗತ್ತೆಲ್ಲ ಒಳ್ಳೆಯದೆಂದೇ ತಿಳಿದಿದ್ದಾನೆ. ಆದರೆ ಈಗ!! ಮನೆಯಲ್ಲಿ ಒಬ್ಬನೇ ಕುಳಿತಿರುತ್ತಾನೆ. ಯಾರಿಗೂ ಮೋರೆ ತೋರುವುದಿಲ್ಲ ಎಲ್ಲಿಂದಾದರೂ ಓಡಿಹೋಗುತ್ತಾನೆಂದರೆ ವಾರಂಟು

ಜಾರಿ ಮಾಡುತ್ತೇವೆ.' ಈಗ ಬಾಬುಗಳೇ ಮ್ಯಾನೇಜರರಾಗಿದ್ದಾರೆ," ಎಂದು ಹೇಳಿದರು.

ಮುಂದೆ ಜಗದೀಶಸಿಂಹ ಬರಾಳಕ್ಕೆ ಬಂದರು. ಅಣ್ಣಂದಿರು ಸಾಲ ತೀರಿಸುವ ಈ ಸುದ್ದಿಯನ್ನು ಕೇಳುತ್ತಲೇ ಹೆದರಿ ಕೋರ್ಟಿನ ಬೆದರಿಕೆ ಹಾಕಿದರು. ತಾಯಿ ಇದನ್ನು ಕೇಳಿ ಒಂದೇ ವಾರದಲ್ಲಿ ತೀರಿಕೊಂಡಳು. ಸಾವಿತ್ರಿಗೂ ಕೆಡುಕೆನಿಸಿತು. ಆದರೆ ತನ್ನ ಪತಿಯ ಉದಾರತೆಯ ಬಗ್ಗೆ ಹೆಮ್ಮೆಯೂ ಉತ್ಪನ್ನವಾಯಿತು. ಲಾಲಾ ಸಾಹೇಬರೊಬ್ಬರೇ ಉಳಿದರು. ಕುದುರೆ ಮಾರಾಟಕ್ಕೆ, ಆನೆಗಳು ಮಾರಾಟಕ್ಕೆ ಹೊರಟುದನ್ನು ನೋಡಿ ಲಾಲಾಸಾಹೇಬ ಕೇಳಿದರು.

"ಇವೆಲ್ಲ ಎಲ್ಲಿ ಹೊರಟಿವೆ?"

"ಒಬ್ಬ ಅರಸನ ಮನೆಯಲ್ಲಿಯ ಉತ್ಸವಕ್ಕೆ."

"ಯಾವ ಅರಸ?"

"ದೀನಸಿಂಹ."

"ಎಲ್ಲಿ ಇರುತ್ತಾರೆ?"

"ದರಿದ್ರಪುರ."

"ನಾವೂ ಬರೋಣವೇ?"

"ಆದರೆ ನಡೆಯುತ್ತ ಬರಬೇಕಾಗುವುದು."

" ಹಾಗಾದರೆ ನಡೆಯುತ್ತಲೇ ಬರುವೆವು."

"ಅಲ್ಲಿ ಪರಿಶ್ರಮಕ್ಕೆ ಹೆಚ್ಚು ಬೆಲೆ."

" ಹಾಗಾದರೆ ನಾವು ಹೆಚ್ಚಿನ ಪರಿಶ್ರಮದ ಕೆಲಸ ಮಾಡುವೆವು."

ಜಗದೀಶಸಿಂಹ ಅಣ್ಣಂದಿರಿಬ್ಬರಿಗೂ ಐದು ಸಾವಿರ ರೂಪಾಯಿ ಪರಿಹಾರದ್ರವ್ಯ ಕೊಟ್ಟು ಬೇರೆಯಾದರು. ಆದರೆ ಆಳುಗಳನ್ನು ಕಡಿಮೆಮಾಡುವುದು ಮಾತ್ರ ಆಗಲಿಲ್ಲ. ದಿನಕ್ಕೂ ಅತಿಥಿ ಅಭ್ಯಾಗತರು ಇದ್ದೇ ಇರುತ್ತಿದ್ದರು. ಅಲ್ಲದೆ ಶಿವದಾಸನ ಮನೆಯನ್ನು ಸಾಗಿಸಬೇಕಾಗಿದ್ದಿತು.

ಆದರೆ ಜಗದೀಶಸಿಂಹರ ಮೋರೆಯ ಮೇಲೆ ದುಃಖದ ಚಿಹ್ನೆ ಎಂದಿಗೂ ಕಂಡುಬರುವುದಿಲ್ಲ. ಯಾವಾಗಲೂ ನಗುಮುಖ. ಮೊದಲು ಸಾಹಿತ್ಯದ

ಮೇಲೆ ಪ್ರೇಮ ಇದ್ದಂತೆ ಈಗ ಹೂದೋಟದ ಮೇಲೆ ಮೆಚ್ಚುಗೆ. ಮುಂಜಾವ ದಿಂದ ಸಂಜೆಯ ವರೆಗೆ ಹೂಗಿಡ ನೋಡುತ್ತಲೇ ಇರುತ್ತಾರೆ. ಪಾಲಕರಾದ ಲಾಲಾ ಸಾಹೇಬರಂತೂ ಒಕ್ಕಲಿಗರಾಗುವುದರಲ್ಲೇ ಇದ್ದಾರೆ.

ಜಗದೀಶಸಿಂಹರ ಕುದುರೆಯಿನ್ನೂ ಗಟ್ಟಿಮುಟ್ಟಾಗಿದೆ. ಆದರೆ ಅದನ್ನು ತಿಂಗಳುಗಟ್ಟಲೆ ಹತ್ತುವುದಿಲ್ಲ. ಈಗ ಹೇಳುತ್ತಾರೆ, "ಸಂಸ್ಥಾನದ ಹೊಣೆ-ಗಾರಿಕೆಯನ್ನಂತೂ ಸಂಪೂರ್ಣವಾಗಿ ಚೆನ್ನಾಗಿ ವಹಿಸುತ್ತಿದ್ದೇನೆ. ಲಾಲಾ ಸಾಹೇಬರು ಇದನ್ನು ಮರೆಯಲಾರರು. ಮನೆಯಲ್ಲಿ ಸಂಪತ್ತು ಇದ್ದರೆ ಸುಖ ಭೋಗ, ಬೇಟೆ, ದುರಾಚಾರಗಳ ಹೊರತಾಗಿ ಏನು ತಾನೇ ಹೊಳೆಯಬಲ್ಲುದು? ನಾವು ಸಂಪತ್ತನ್ನು ಮಾರಿ ಪರಿಶ್ರಮವನ್ನೂ ಸಂತೋಷವನ್ನೂ ಕೊಂಡುಕೊಂಡಿ-ದ್ದೇವೆ. ಇದರಲ್ಲೇ ನಮ್ಮ ಸ್ವರ್ಗಸುಖ."

ಆದರೆ ಸಾವಿತ್ರಿಗಿನ್ನೂ ತೃಪ್ತಿಯಿಲ್ಲ. ಜಗದೀಶಸಿಂಹರು ಅಡ್ಡಿ ಮಾಡಿ ದರೂ ಅವಳು ಚಿಕ್ಕ ಪುಟ್ಟ ಕಾಣಿಕೆಗಳನ್ನು ಸ್ವೀಕರಿಸುತ್ತಾಳೆ; ವಂಶದ ಪದ್ಧತಿ ಯನ್ನು ಬಿಡಬಯಸುವುದಿಲ್ಲ.

---